

**ವೈ. ಎಂ. ಷಣ್ಮುಖಯ್ಯನವರು.**

ಕನ್ನಡ ಸಣ್ಣ ಕತೆಗಳ ಕ್ಷೇತ್ರದಲ್ಲಿ ಶ್ರೀ ಷಣ್ಮುಖಯ್ಯನವರ ಸಣ್ಣ ಕತೆಗಳು ಒಂದು ವಿಶಿಷ್ಟ ಸ್ಥಾನವನ್ನು ಪಡೆದಿವೆ. ಈ ಲೇಖಕರ ಹಲವಾರು ಸಣ್ಣ ಕತೆಗಳು ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿವೆ; ಹಲವು ಸಂಕಲನಗಳೂ ಹೊರಬಿದ್ದಿವೆ.

ಈ ಸಣ್ಣ ಕತೆಗಳಲ್ಲಿ ನಾವು ಕಾಣಬಹುದಾದ ವಿಶೇಷ ಆಕರ್ಷಣೆಯೆಂದರೆ ಸರಳ ಶೈಲಿ, ಕಥಾತಂತ್ರ ನಾವೀನ್ಯತೆ, ತಿಳಿಯಾದ ಬರವಣಿಗೆ ಮತ್ತು ಪಾತ್ರರಚನೆ.

ಈ ಸಂಕಲನ ನಮ್ಮ ಓದುಗರಿಗೆ ಮೆಚ್ಚುಗೆಯಾಗುವುದೆಂದು ನಾವು ಭಾವಿಸಿದ್ದೇವೆ.



ಬೆಲೆ.

೧ರೂ. ೪೮.

ಶಾರದಾ ಸಾಹಿತ್ಯ ಮಾಲೆಯ ೧೫ನೇ ಕಿರಣ

# ದೇವತೆಗಳು ನಕ್ಕಾಗ

ಹತ್ತು ಕತೆಗಳ ಸಂಕಲನ

ಲೇಖಕರು :
ವೈ. ಎಂ. ಷಣ್ಮುಖಯ್ಯ.

ಪ್ರಕಾಶಕರು :
ಶಾರದಾ ಪ್ರಕಟಣಾಲಯ
ಅರಳೇಪೇಟೆ, ಬೆಂಗಳೂರು ೨

# ಮುನ್ನುಡಿ.

ಇದು ನನ್ನ ಐದನೆಯ ಕಥಾಸಂಗ್ರಹ. ಈ ಸಂಗ್ರಹ ಕೆಲವು ವರ್ಷಗಳ ಹಿಂದೆಯೆ ಬರಬೇಕಾಗಿತ್ತು. ಬರೆದ ಪುಸ್ತಕ ಅಚ್ಚಿಗೆ ಬರುವುದರಲ್ಲಿಯೂ ಯಾವುದೊ ದೈವತಂತ್ರವಿದೆಯೇನೊ.

ಇದರಲ್ಲಿ ಬರೆದ ಕಥೆಗಳು ಕೆಲವು ವರ್ಷಗಳ ಹಿಂದೆ ಬರೆದವು; ಇದರಲ್ಲಿ ಸೇರಿಸಿರುವ ಮುಖಬಿಂಬಚಿತ್ರ ಅದಕ್ಕೂ ಕೆಲವು ವರ್ಷ ಹಿಂದಿನದು; ಕಥೆಗಳಲ್ಲಿ ಬರುವ ಜನರು ಇನ್ನೂ ಹಿಂದಿನವರು; ಇನ್ನು ದೇವತೆಗಳ ವಿಚಾರ—ನನಗೆ ಹೇಳಲು ಬಾರದು.

ಈ ಕಥೆಗಳನ್ನು ಓದುವಾಗ ನೀವು ಅಲ್ಲಲ್ಲಿ ನಗಬಹುದು, ಮಾನವನನ್ನು ಕುರಿತು ವಿಷಾದಪಡಲೂಬಹುದು. ಅಲ್ಪನಾದ ಮಾನವನು ಪಡುವ ಬವಣೆ ನೋಡಿ ದೇವತೆಗಳು ನಗುತ್ತಾರೆ—ಎಂದು ಪ್ರಾಚೀನ ಗ್ರೀಕರು ವಿಲಪಿಸುತ್ತಿದ್ದರು. ಹೌದು, ತಾವು ಸೃಷ್ಟಿಸಿದ ಮಾನವನನ್ನು ನೋಡಿ ದೇವತೆಗಳು ನಗುತ್ತಾರೆ; ನಮ್ಮನ್ನು ನೋಡಿ ನಾವೇ ನಗುತ್ತೇವೆ. ದೇವತೆಗಳಕೂಡ ನಾವೂ ನಗಬಲ್ಲೆವೆ?

ಪ್ರಕಾಶಕರು, ಉತ್ಸಾಹದಿಂದ, ಈ ಪುಸ್ತಕ ಹೊಸವರ್ಷದ ಆದಿ ದಿನವೆ ನಿಮ್ಮ ಕೈಸೇರುವ ವ್ಯವಸ್ಥೆ ಮಾಡಿದ್ದಾರೆ. ಹಾಗೆ ಇದು ಸೇರಬೇಕೆಂಬ ಸಂಕಲ್ಪದಲ್ಲಿಯೂ ಏನೊ ಒಂದು ಔಚಿತ್ಯವಿದ್ದಿತೇನೊ. ದೇವತೆಗಳ ನಗುವಿನ ಕಥೆಯೋದುವ ನಿಮಗೆ ಆ ದೇವತೆಗಳು, ದೇವತೆಗಳಿಗೆ ದೇವರುಗಳಾದ ಆ ಇಬ್ಬರು ಹರ್ಷಕೊಡಲಿ.

ಹೊಸವರ್ಷ! ಪೃಥ್ವಿಯು ಸುಸಸ್ಯಶಾಲಿನಿಯಾಗಲಿ; ದೀನರು ತುಷ್ಟರಾಗಲಿ; ದೇಶಗಳ ನಡುವೆ ಶಾಂತಿ ನೆಲೆಸಲಿ.

೨–೪–೧೯೫೧. **ವೈ. ಎಂ. ಷಣ್ಮುಖಯ್ಯ.**

ಬೆಂಗಳೂರು

## ಈ ಸಂಗ್ರಹದಲ್ಲಿ........

# ದೇವತೆಗಳು ನಕ್ಕಾಗ—

**ಬೆಂ**ಗಳೂರಿನ ಪಶ್ಚಿಮಕ್ಕೆ—ಒಂದೆಡೆ ಬಯಲು. ಅಲ್ಲಲ್ಲಿ ಒಂದೊಂದು ಮರ. ಉಬ್ಬಿದ ಬಯಲುಗಳು ಅಲ್ಲಿ ಇಲ್ಲಿ ಇಳಿದು ಓರೆಯಾಗಿ ಕೂಡುವೆಡೆಗಳಲ್ಲಿ ಹಸುರು ಮೆರೆದಿದೆ. ತೆಂಗಿನ ಮರಗಳು, ಇತರಮರಗಳು, ಅವುಗಳ ನಡುವೆ ಸಣ್ಣ ಪುಟ್ಟ ಹಳ್ಳಿಗಳು, ಕೆಂಪು ಹೆಂಚಿನ ಮನೆಗಳ ಗೊಂಚಲು ಇವೆಲ್ಲ ಹಲವು ಮೈಲಿಗಳ ತನಕ ಪಸರಿಸುವ ಬಯಲಲ್ಲಿ—ಹಸರ ಮಧ್ಯೆ ಕುಂದಣವಿತ್ತಂತೆ-ರಂಜಿಸುತ್ತವೆ. ಆ ಬಯಲುಗಳ ಉಬ್ಬಿದ, ಇಳಿದ,ಮೈಯ್‌ಕೂಡ ಹಸುರಿನಿಂದ, ಹಳದಿಹೂಗಳ ಹಾಸಿಗೆಯಿಂದ ಚಿತ್ರಿತವಾಗಿರುತ್ತದೆ— ವರ್ಷದ ಕೆಲವು ತಿಂಗಳಲ್ಲಿ, ಇವುಗಳ ಮಧ್ಯೆ ಸುತ್ತಿ, ಬಳಸಿ, ಇಳಿದು, ಏರಿ—ಹಾವು ಹರಿದು ಧೂಳಿನಲ್ಲಿ ಗುರುತು ಆದಂತೆ— ಮನುಷ್ಯ ದನಕರುಗಳು ಅನೇಕ ವರ್ಷಗಳಿಂದ ಹಾದು, ನಡೆದು, ಚಲಿಸಿ ಗುರುತು ಬಿದ್ದಿರುವ ದಾರಿಗಳು; ಅವುಗಳದೂ ಒಂದು ಚೆಲುವು!

ಊರ ಮಧ್ಯದ ಒಂದು ಕೆರೆಯಿಂದ ಆಧಾರಗೊಂಡು ಲಲ್ಲೆಯಿಂದ ಕಂದಕ ಕೋಡಿಗಳಲ್ಲಿ ಹರಿದು, ಮೊರೆದು, ಕುಣಿದು ಮಕ್ಕಳ ಆಟದಂತೆ ಸರಿದುಹೋಗುವ ಹಳ್ಳವೊಂದು ಇದೆ. ಹಿಂದೆ ನಗರ, ನಗರ ಜೀವನ ಬೆಳೆಯದಿದ್ದಾಗ ಅದು ಒಂದು ಚೆಲುವಿನ ತೊರೆಯಾಗಿರಬೇಕು. ಹಳ್ಳಿಯ ಮನೆ ತೊರೆದು ಪಟ್ಟಣಕ್ಕೆ ಬಂದು ಜೆಲಿಹೆಣ್ಣಿನ ಜೀವನ ಕಲ್ಪಿಸಿಕೊಂಡಿರುವವ

ಳಂತೆ ಆ ಹಳ್ಳವು • ಈಗ ಮಲಿನವಾಗಿದೆ, ಕೊಚ್ಚೆ—ಕೊಳಕು— ಫ್ಯಾಕ್ಟರಿಯ ಹೊಲಸು—ಎಲ್ಲ ಬಂದು ಸೇರಿ. ಹಿಂದೆ ಅದಕ್ಕೆ ಚೆಲುವು ಇತ್ತು; ವಿಲಾಸವಿತ್ತು; ಶುದ್ಧತೆಯೂ ಇತ್ತು. ಆಗ ಭಾವುಕ ಜನ ಅದರ ತೀರಸ್ಥವಾದ ದಿಬ್ಬದ ಮೇಲ್ಗಡೆ ಒಂದು ತೋರುಗಲ್ಲಿನ ತುದಿಯಲ್ಲಿ ಮಂಟಪ ಕಟ್ಟಿ, ಗೋಡೆ ಹಾಕಿ, ಒಳಗೊಂದು ವೃಷಭ ಮೂರ್ತಿಯನ್ನು— ಮುದ್ದಿನ ಬಸವನನ್ನು ತಂದು ಸ್ಥಾಪಿಸಿದರು. ಕೆಳಗೆ ತೋರುಗಲ್ಲಿನಲ್ಲಿಯೇ ಆಗಿನ ಶಿಲ್ಪಿ, ಏಕಾಂಗಿಯಾದ ದ್ವಿತೀಯ ಶಂಭುವಿನ ಕೂಡ ಸಹವಾಸಿಯಾಗಿರಲೆಂದು ಶುಭಗಾತ್ರನಾದ ಪಾರ್ವತೀನಂದನನನ್ನು ಕೆತ್ತಿ ನೆಲೆಸುವಂತೆ ಮಾಡಿದನು. ಸ್ವೇಚ್ಛೆಯಿಂದ ಹೂಗಿಡಗಳು, ಬಿಲ್ವಪತ್ರ ಮುಂತಾದ ಮರಗಳು ಬೆಳೆದವು.

ಸೌಮ್ಯವಾದ ವಾತಾವರಣದಲ್ಲಿ ನಿಂತು ಆ ಆಲಯ ಶಾಂತಿಗೆ, ಮನಃಶ್ಯುದ್ಧಿಗೆ ಬೀಡಾಯಿತು.

ಹತ್ತಿರದಲ್ಲಿ ಒಬ್ಬ ಸಂಸಾರತ್ಯಾಗಿ ಬಂದು ನೆಲಸಿ, ತನ್ನದೊಂದು ನೆಲೆಯನ್ನು ಕಟ್ಟಿಸಿ, ತನ್ನ ಧ್ಯಾನಕ್ಕೆ ಗುಹೆಯೊಂದನ್ನು ಕೊರೆದುಕೊಂಡು ಜನಸಂಗದಿಂದ ವಿಮುಖನಾಗಿ, ಏಕಾಂತವಾಸಿಯಾಗಿದ್ದ. ಅಲ್ಲೊಂದೆರಡು ಮನೆಗಳು ಬೆಳೆದವು. ತೋಟವಾಯಿತು. ಜನದ ತಂಡ ಬಂದು ನೆರೆಯಿತು. ಅದೂ ಆಯಿತು. ಅವನು ಹೋದ. ಅವನ ನಂತರ ಇನ್ನೊಬ್ಬ ಶಿಷ್ಯನಾದ. ಅದೂ ಎಷ್ಟೋ ವರ್ಷಗಳ ಮಾತು. ಮೊದಲಿನವನಿದ್ದಾಗ ಇದ್ದ ಪ್ರಶಸ್ತಿ ಈಗ ಇಲ್ಲ. 'ಓ! ಅದು ಎಂದೊ ಹಿಂದಿನ ಮಾತು' ಎನ್ನುತ್ತಾರೆ.

ತೋರುಗಲ್ಲಿನ ಮೇಲೆ ಮಂಟಪವಿದೆ. ನಿರ್ಲಿಪ್ತನಾಗಿ ತನ್ನೆದುರು ಹಬ್ಬಿರುವ ನಗರವನ್ನು ನಿರೀಕ್ಷಿಸುತ್ತ ವೃಷಭನಾಥ ಕುಳಿತಿದ್ದಾನೆ. ಕೆಳಗೆ ಗಣನಾಥ—ಅವನೂ ಸಾಕ್ಷಿಯಾಗಿದ್ದಾನೆ. ಈ ನಗರ—ಪ್ರಪಂಚದ ನಡವಳಿಕೆಗಳಿಗೆ.

ವೃಷಭನಾಥನಿಗೆ ಕೊಂಚ ಹರಟೆಯ ಆಶೆಯಾಗಿದೆ. ದೇವರುಗಳಾದರೂ ಎಷ್ಟು ಹೊತ್ತು ಸುಮ್ಮನೆ—ಬಿಮ್ಮನೆ ಕುಳಿತಾವು ಹೇಳಿ?

"ಓ, ಗಣಪತಿ! ಪುಟ್ಟಸ್ವಾಮೀ! —ಲೋ ಪುಟ್ಟೂ!"

"ಓ! —ಕರೆದಿರಾ?" ಎನ್ನುತ್ತಾನೆ ಗಿರಿಜಾಸುತ. .

"ಇಲ್ಲಿ ಕಡಲೆಕಾಯಿತ್ತು. ಯಾರೊ ಇರಿಸಿ ಹೋಗಿದಾರೆ. ಬರೋಕಾ ದೀತೇ ಮೆಟ್ಟಿಲು ಹತ್ತಿ?"

"ಹಸೀದೋ? ಹುರಿದದ್ದೊ?"

"ಅದು ಗೊತ್ತಾಗೋಲ್ಲ."

"ಬೆಲ್ಲ ಏನಾದ್ರೂ ಮಡಗಿದ್ದಾರಾ ಆತ ?"

"ಇದ್ದಾಗೆ ಕಾಣೆ"

"ಏನು ಸುಖ! ಇಲ್ಲೆ ಕಬ್ಬು ಒಂದು ಕಂತೇನೆ ಇದೆ. ಬಾಯಿಕಚ್ಚಿ ತಿನ್ನ ಲಾರೆ. ಆದರೆ ನೀವೂ ತಿನ್ನಲಾರಿರಿ. ಅದು ಸೀಮೆ ಕಬ್ಬು—ಮೋರಿಷ್"

"ಎಲ್ಲಿ ತರಬಾರದೇನಯ್ಯ! ನೀನು ಜಾಣಮರಿ—ಎಲ್ಲಿ ಹೀಗೆ ಕಳಿಸಿ ಕೊಡು ಒಂದು ನಾಲ್ಕು ತುಂಡು."

"ಯಾರ ಕೈಲಿ ಕಳಿಸಲಿ? ತಗೊಂಡುಬಾ ಅಂತ ಹೇಳೋದಕ್ಕೆ ಕಳಿಸಿ ಕೊಡು ಅಂತ ಈ ದೊಡಸ್ತಿಕೆ ಮಾತು."

"ಏಕಯ್ಯ ನಗ್ತೀಯ?"

• "ಈಗ ಸುಳ್ಳುಹೇಳಿದವ್ರು ಯಾರು? ನನಗೆ ಸಮಸ್ಯೆ; ಸುಳ್ಳು ಹೇಳಿದ ವನು ನಾನೋ ನೀವೊ?"

"ನೀನು ಸುಳ್ಳು ಹೇಳಿದ್ದು ನಿನಗೇ ಗೊತ್ತಿಲ್ಲವೆ?"

"ನೀವು ಸುಳ್ಳು ಹೇಳಿದ್ರೆ ನನಗ್ಹೇಗೆ ಗೊತ್ತು?"

"ಹಾಗಾದರೆ ಇದು ಕುಚೋದ್ಯ ಅನ್ನು!"

"ಎಂದರೆ ನೀವು ಹೇಳಿದುದೂ ಸುಳ್ಳೆ?"

"ಇಲ್ಲ, ಇವೆ ಇಲ್ಲಿ ಕಡಲೆಕಾಯಿ"

"ಹಾಗಾದರೆ ಇಲ್ಲಿ ಕಬ್ಬು ಇರೋದು ನಿಜ................ತಾವೇ ಕೆಳಗೆ ಬರೋಣವಾಗಲಿ. ಆದರೆ—ಮೆಟ್ಟಿಲಿಳಿದು ಬರುವಾಗ ಮೆಲ್ಲನೆ ಎಚ್ಚರದಿಂದ ಕೆಳಗಿಳಿಯುವುದಾಗಬೇಕು. ಮೈ ಶಾನೆ ದೊಡ್ಡದು. ಆದರೆ ಕಾಲುಗಳು ನಾಲ್ಕು ಇವೆ, ಅದೊಂದು ಸಹಾಯ"

"ನಿನ್ನ ಮೈ ಚಿಕ್ಕದು—ಆದಕ್ಕೇ ಎರಡು ಕಾಲು–ನಿನಗೆ ಬಿದ್ದರೂ ಬಾಧೆ ಇಲ್ಲ; ಮುದ್ದೆ ಮೈ ಬಿದ್ದಲ್ಲೆ ಉರುಡಿಕೊಳ್ಳುತ್ತೆ. ಆದರೆ ನಮ್ಮಂಥವರಿಗೆ ಹಾಗಾದೀತೆ? ಬರುತ್ತಿದ್ದೇನೆ."

"ಹೋ! ಹೋ! ತಾಳಿ, ತಾಳಿ, ವೃಷಭದೇವ! ಅವ ನಿಮ್ಮ ಭಕ್ತ ಬರುತ್ತಿದ್ದಾನೆ."

"ಯಾರು ?"

"ಅವನು, ಆ ಷೋಕುಗಾರ—ಎರಡು ಗಾಲಿಗಳಿಂದ ಉರುಳುವ ನವೀನ ಗಾಡಿಯ ಮೇಲೆ ಬರುವವನು. ನೋಡಿ ಅಲ್ಲಿಂದಲೆ ಹಾಡಿಕೊಂಡು ತಲೆ ಯಾಡಿಸಿಕೊಂಡು ಕಾಲು ಮೀಟಿಕೊಂಡು ಬರುತ್ತಿದ್ದಾನೆ."

"ಏನು ಪಜೀತಿಗಿಟ್ಟೆಯೊ? ಇಳೀತಿದ್ದೇನೆ. ಈಗ ಹ್ಯಾಗೆ ಹಿಮ್ಮುಖ ವಾಗಿ ಹೋಗಿ ಪೀಠದ ಮೇಲೆ ಕುಳಿತುಕೊಳ್ಳೋದು? ಇಲ್ಲಿ ಈ ಮಂಟಪದಲ್ಲಿ ತಿರುಗೋಕೆ ಕೂಡ ಇಲ್ಲ ಜಾಗ! ನಿನ್ನ ಹುಡುಗಾಟ—ನಿನ್ನ ಚೇಷ್ಟೆ ಸಾಕು!"

"ನಿಧಾನವಾಗಿ ಹೋಗಿ! ಆವಸರ ಮಾಡಿ ಬಿದ್ದೀರಿ. ನಿಮ್ಮನ್ನು ನಾನಾಗ ಎತ್ತಲಾರೆ. ಬೇರೆ ಇನ್ನಾರೂ ಸಹಾಯಕ್ಕಿಲ್ಲ! ಇಲ್ಲಿ ಇರುವವರು ನಾವಿಬ್ಬರೆ! ಏನು ಕಾಡಿಸುತ್ತಾರೊ ನಮ್ಮನ್ನು ಈ ಭೂಲೋಕದ ಜನಗಳು"

"ಅಯ್ಯೊ ಕೊಂಚ ಹೊತ್ತಾಗುತ್ತೆ ತಿರುಗೋದು — ಸರಿಯಾಗಿ ಕೂಡೋದು. ಅವನ್ನ ನಿನ್ನ ಪ್ರಭೆಯಿಂದ ನಿನ್ನ ಹತ್ತಿರವೆ ತಡೆದು ನಿಲ್ಲಿಸಿಕೋಬಾರದೆ—ಎಲೆಕ್ಟ್ರಿಕ್ ಟಾರ್ಚ್ ಹಿಡಿದು ನಿಲ್ಲಿಸಿದಹಾಗೆ ?"

"ಅದೇನು ಬೇಡ ಅಂದ್ರೆ. ಅವನು ಹೋಗಿ, ಹೂವು ಪತ್ರೆ ಅದೆಲ್ಲ —ಎತ್ತಿಕೊಂಡು ಬರುವುದರಲ್ಲಿ ನೀವು ಸರಿಯಾಗಿ ನಿಮ್ಮ ಮೊದಲಿನ ನಿರ್ಲಿಪ್ತ ಭಾವದಿಂದ ಮಂಡಿಸಿರಬಹದು ?"

"ಹೇಳಿದಷ್ಟು ಮಾಡಯ್ಯ: ಮುದುಕನಿಗೆ ಎಷ್ಟು ಗೋಳುಹೊಯ್ದು ಕೊಳ್ಳುತ್ತೀಯ ?"

"ದೇವರ ಅಪ್ಪಣೆಯಾದಂತೆ."

ಮತ್ತೆ ಗಣನಾಥನ ವಾಕ್—"ಏನು ? ಈತ ಮಹಾ ಬೆರಕೆ ಸಂಪ್ರ ದಾಯದವನಿರಬೇಕು ? ನಿಮ್ಮನ್ನೂ ನನ್ನನ್ನೂ ಪೂಜಿಸುವಾಗ 'ನಾರಾಯಣ, ನಾರಾಯಣ,' ಎನ್ನುತ್ತಾನೆ ! ನನ್ನನ್ನೇನೊ ಶುಕ್ಲಾಂಬರಧರ—ವಿಷ್ಣು ಎನ್ನುತ್ತಾರೆ ಈ ಲೋಕದ ಜನ. ಹೋಗಲಿ-ಆದರೆ ನಿಮ್ಮನ್ನು ನಾರಾಯಣ ಎನ್ನುವುದೆ ?"

"ಅವನಿಗೆ ಅಭ್ಯಾಸವಾಗಿರುವುದು ಅದೇ ಕಾಣಯ್ಯ. ಅಲ್ಲದೆ ಅದರ ಲ್ಲೇನೂ ತಪ್ಪಿಲ್ಲ. ವಿಷ್ಣು ರೂಪಾಯ ಶಿವ। ಶಿವರೂಪಾಯ ವಿಷ್ಣುವೆ॥ ಎಂತ ಇದೆ. ಅದಿರಲಿ ನೋಡು ಅವ ಏನು ಜೋರಿನಿಂದ ಪೂಜೆ ನಡೆಸಿದ್ದಾನೆ ! ಬಹಳ ಅವಸರ "

"ಅವನೀಗ ಸಿನೀಮಾಕ್ಕೆ ಹೋಗಬೇಕು ; ಭಾನುವಾರ"

"ಏನು ಹಾಗಂದರೆ ?"

"ಅದೊಂದು ಬಗೆ ಕಳ್ಳಕ್ಯಾತರ ಆಟ. ಅಲ್ಲಿ ತಾರೆಯರು ಬರುತ್ತಾರೆ:,,

"ತಾರೆಯರು ಯಾರು ?"

"ಅವರು ಚೆನ್ನಾಗಿರುವ ಹೆಂಗಸರು ; ಅಲ್ಲಿ ಕುಣಿಯುತ್ತಾರೆ. ಬಣ್ಣ ಬಳಿದಿರುತ್ತಾರೆ. ಬಳುಕುತ್ತಾರೆ. ಅದೊಂದು ಆಟ."

"ನೀನೂ ಹೋಗು ನೋಡಲಿಕ್ಕೆ."

"ಅಮ್ಮನ್ನ ಕೇಳಿಲ್ಲ ; ಕೇಳದೆ ಹೋದರೆ ಬಯ್ತಾಳೆ."

"ಹೋಗಲಿ, ಇವನು ಹೋದ. ಕಬ್ಬು ಎರಡು ತೆಗೆದುಕೊಂಡುಬಾ ; ಇಲ್ಲೆ ಕಡಲೇಕಾಯಿದೆ ; ಇಬ್ಬರೂ ತಿನ್ನೋಣ."

"ಬರಲೇಬೇಕೊ ?"

"ಇಷ್ಟರಮೇಲೆ ನಿನ್ನಿಷ್ಟ. ಕಷ್ಟವಾಗೋ ಹಾಗಿದ್ದರೆ ಬೇಡ."

"ಬಂದೆ ತಾಳಿ," ಎಂದ ಗಣೇಶ.

"ಓಹೋ ! ಓಹೋ ! ಬಂದ್ನಯ್ಯ ಈ ಭೂಲೋಕದ ಪ್ರಮಥ ಒಬ್ಬ-ಬೆದರಿಬಿಟ್ಟೆ ! ನೀನು ಬಿದ್ದೀಯ ಗಣೇಶಾ, ಅಂದು ಬಿದ್ದು ಹಲ್ಲು ಮುರಿದು ಕೊಂಡು ಚಂದ್ರನೊಂದಿಗೆ ಜಗಳಕ್ಕೆ ಹೋಗಿ ಅವನನ್ನು ಬೈದೆ. ಇವತ್ತು

ಬಿದ್ರೂ ಪರವಾಯಿಲ್ಲ ಅನ್ನು. ನೋಡಿ ನಗೋಕೆ ಹೆಚ್ಚು ಜನ ಇಲ್ಲ. ಆದ್ರೂ ಯಾಕೆ ಸುಮ್ಮನೆ ಬೀಳಬೇಕು? ಮೆಲ್ಲಗಿಳಿ! ಮೆಟ್ಟಿಲು ಕಡಿದು."

"ಅಂತೂ ನಾ ಬೀಳಬೇಕು, ನೀವು ನೋಡಿ ನಗೋದಲ್ಲದೆ, ಬೇರೆ ಜನಾನು ಇರಬೇಕು ನಗೋದಕ್ಕೆ! ಮುದುಕರಾಗಿಯೂ ಸಮಾಧಾನ ಇಲ್ಲಲ್ರೀ. ಅವ–ಶರಣ, ನನ್ನ ಪೂಜಕನಲ್ಲ. ಸೀದಾ ಬಂದವನು ನಿಮ್ಮನ್ನೆ ಪೂಜಿಸಿ ಹೋಗುತ್ತಾನೆ. ಏನೋ ಕೊಸರಿಗೆಂದು ನನ್ನ ಕಡೆ ನೋಡಿ 'ಗುಡ್ ಮಾರ್ನಿಂಗ್' ಮಾಡುತ್ತಾನೆ. ಈ ಲಿಂಗಧಾರಿಗಳೆಲ್ಲ ಹಾಗೆ. ನನ್ನ ಕಂಡರೆ ಲಕ್ಷ್ಯವಿಲ್ಲ."

"ಹೇಗಿದ್ದೀತು? ನಿಮ್ಮ ತಂದೆಯೇ ಅವರವನಾಗಿರುವಾಗ. ಅವರಿಗೆ ನೀನು ಲಕ್ಷ್ಯವೆ?"

"ನೋಡಿ, ವೈಷ್ಣವರೂ ನನ್ನನ್ನು ಪೂಜಿಸುತ್ತಾರೆ. ಮೊದಲು ಎಲ್ಲದಕ್ಕೂ ನಾನಿರಬೇಕು. ಮೂರು ನಾಮದವರೂ ಸಹಿತ."

"ನಿನ್ನಮೇಲಿನ ಭಕ್ತಿಗಲ್ಲ! ನೀನೇನಾದರೂ ಕೆಡುಕು ಮಾಡಿದರೆ? ಅದಕ್ಕಾಗಿ."

"ಆ ಹೆದರಿಕೆ ಇವಕ್ಕೆ ಬೇಡವೊ?"

"ನಿಮ್ಮ ತಂದೆಯು ಸಲುಗೆ ಈ ರೀತಿ ಮಾಡಿರಬೇಕು."

"ನೋಡಿ ಇದನ್ಯಾಯವಲ್ಲವೆ? ಇವರಿಗೆ ಗೋತ್ರಾಧಿನಾಯಕನಾಗುವ ಹಕ್ಕು ನನಗಿಲ್ಲದೆ ಹೋಯಿತು. ನಾನು ಯಾವ ಜಾತಿ?"

"ನೀನು ಸ್ಮಾರ್ತರವನು—ಅಡ್ಡಗಂಧ."

"ಹಾಗೋ? ನನ್ನ ಅಧಿಕಾರ?"

"ಲೋಕದ ಮೇಲೆಲ್ಲ! ಅದರಲ್ಲೇನು ಸಂದೇಹ?"

"ಇವರ ಮೇಲೆ?"

"ವಿಚಾರಿಸಬೇಕು; ಗೌರ್ನಮೆಂಟ್ ಆರ್ಡರು ಸರಿಯಾಗಿ ಹೊರಟಿಲ್ಲ ಈ ವಿಚಾರದ ಮೇಲೆ. ನೀನು ಅರ್ಜಿ ಹಾಕ್ಕೊ ನೋಡೋಣ."

"ನೀವು ಆ ಬಗ್ಗೆ ಶಿಫಾರಸು ಮಾಡಬಾರದೆ? ನಿಮ್ಮ ವಸೀಲಿ ಹಚ್ಚ ಬಾರದೆ?"

"ಬರೀ ಪುಗಸಟ್ಟೆ ಮಾಡಿಕೊಡಬೇಕೆ?"

"ಕೆಲಸ ಆದಮೇಲೆ ಮರ್ಯಾದೆ!"

"ಆಲ್ ರೈಟ್—ನಾನೂ ಒಂದೆರಡು ಇಂಗ್ಲೀಷ್ ಮಾತು ಕಲಿತಿದ್ದೇನೆ"

"ಕಲಿಯಬೇಕಾದದ್ದೆ . ......... ... ಮಾತನಾಡಬೇಡಿ ಸುಮ್ಮನಿರಿ. ಆ ಚೊಟ್ಟೆ ಹುಡುಗ—ಬಣ್ಣದ ಹುಡುಗಿ ಬರುತ್ತಿದ್ದಾರೆ"

"ಏ! ಗಣೇಶ್! ಅದೇನು ಆ ಹುಡುಗರು ಹಾಗೆ ಒಬ್ಬರ ಮೂತಿ ಒಬ್ಬರು ಮೂಸಿನೋಡುತ್ತಿದ್ದರು? ಒಬ್ಬರ ಬಾಯಿ ಒಬ್ಬರಿಗೆ ತಗುಲಿದರೆ ಎಂಜಲಲ್ಲವೆ?"

"ಅದು ಪ್ರೀತಿಗೆ ಹಾಗೆ ಮಾಡುತ್ತಾರೆ"

"ಪ್ರೀತಿ ಎಂದರೇನು?"

"ನಿಮಗೆ ತಿಳೀದೆ ಚಿಕ್ಕಪ್ಪಾಜಿ?"

"ಇಲ್ಲಪ್ಪ ನಾನಿದೊಂದನ್ನೂ ಕಂಡವನಲ್ಲ. ನೀನು ಹೇಳಿವೆಯಲ್ಲ ಅದೇನು?"

"ಪ್ರೀತಿ!"

"ಹಾಗೆಂದರೆ ಏನು?"

"ಅದ್ಹೇಳೋಕೆ ನಂಗೊತ್ತಿಲ್ಲ; ಅದೆಂದೂ ನಾನು ಅನುಭವಿಸಿಲ್ಲ"

"ಮತ್ತೆ ಆ ಶಬ್ದ ಹೇಗೆ ಗೊತ್ತು?"

"ಇಂಥವು ಬಂದು ನನ್ನ ಬೇಡಕೊಂತವೆ—ನನಗೆ ಇಂಥವ್ರಲ್ಲಿ ಪ್ರೀತಿ ಬರೋಹಾಗೆ ಮಾಡು; ಅಂಥವರಲ್ಲಿ ಪ್ರೀತಿ ಉಳಿಯೋಹಾಗೆ ಮಾಡು, ಅಂತ, ಅದರಿಂದ, ಅದನ್ನು ಕೇಳಿದ್ದೆ; ಹೇಳಿದೆ ನಿಮಗೆ."

"ಹಾಗಾದರೆ ಪ್ರೀತಿ ಅನ್ನೋದು ನಿಂಗೊತ್ತಿಲ್ಲ?"

"ನಾನು ಮದುವೆ ಆಗಿದೇನೆಯೇ ನಂಗೊತ್ತಾಗೋದಕ್ಕೆ?"

"ಮದುವೆ ಆಗಬೇಕೊ ಅದು ಗೊತ್ತಾಗೋಕೆ?"

"ಹೌದು"

"ನಿನ್ನ ತಮ್ಮನಿಗೆ ಗೊತ್ತೊ ?"

"ಇರಬೇಕು !"

"ನೀನ್ಯಾಕೆ ಮದುವೆ ಆಗ್ಲಿಲ್ಲ ?"

"ನನಗೇನೊ ನಮ್ಮಮ್ಮನಂತವಳನ್ನೆ ಮದುವೆ ಆಗಬೇಕು ಅಂತ ಆಸೆ. ಎಲ್ಲಿ ಅವಳೆ ನಮ್ಮಮ್ಮನಂತ ಇನ್ನೊಬ್ಬ ಹೆಣ್ಣು ? ಅದಕ್ಕೇ ನಾನಾಗಲಿಲ್ಲ."

"ಏನೋ ಅಪ್ಪ. ನೀವೇನೊ ಈ ಕಾಲದ ಹುಡುಗರು. ನನಗೇನೊ ಪ್ರಪಂಚದ ಎಲ್ಲ ಹೆಂಗಸರೂ ನಮ್ಮ ಅಮ್ಮ ಗೌರೀದೇವಿಯ ಹಾಗೆ ಕಾಣ್ತಾರೆ."

"ನೀವು ಮುದುಕರು; ನಿಮಗೆ ಗೊತ್ತಾಗೊಲ್ಲ. ನಮ್ಮ ಅಮ್ಮನ ಹಾಗೆ ಇನ್ನಾರೂ ಇಲ್ಲ. ಇದ್ದಿದ್ರೆ ಮದುವೆ ಆಗಿಯೇ ಬಿಡುವೆ."

"ಅದಿರಲಿ, ಈ ಪ್ರೀತಿ ಮಾಡೋದು ನಿಂಗೆ ತಿಳಿದಿರಬೇಕು? "

"ಅಷ್ಟು ತಿಳಿದಿಲ್ಲ."

"ತಿಳಿದಷ್ಟೆ ಹೇಳು."

"ನೋಡಿ ! ಅಪ್ಪಾಜಿ ಹತ್ತಿರ ಆಗ್ಲಿ ಅಮ್ಮನ ಕೂಡ ಆಗ್ಲಿ ಹೇಳಿದ್ರೆ ನಿಮ್ಮ ಜೊತೇನೆ ಬಿಟ್ಟುಬಿಡ್ತೀನೆ"

"ಇಲ್ಲೋ ಅಣ್ಣ ; ಹೇಳೋ ನನ್ನ ಜಾಣ"

"ಒಂದು ದಿನ, ನಾನು ಕೂತಿದ್ದೆ. ಆಚೆ ಅಮ್ಮ, ಈಚೆ ಅಪ್ಪ ಇದ್ರು ನೋಡಿ ಅವ್ರಿಗೇನಾಯಿತೊ ! ನನ್ನ ಕೆನ್ನೇಗೆ ಮುತ್ತಿಕ್ಕೋಕೆ ಬರೋದೆ ?"

"ಹಾಗಂದ್ರೆ ?"

"ರೀ ! ನೀವು ಸುಮ್ಮನೆ ವಯಸ್ಸು ಕಳದ್ರಿ ! ಹನ್ನೊಂದು ವರ್ಷದ ಹುಡುಗನಿಗಿರೋ ಅನುಭವ ನಿಮಗಿಲ್ಲ ! ಕೆನ್ನೆ ಮೂಸಿ ನೋಡೋದಕ್ಕೆ ಮುತ್ತಿಕ್ಕೋದು ಅಂತಾರೆ."

"ಆಮೇಲೆ ?"

"ಅಯ್ಯನೂ ಅಮ್ಮನೂ ನನ್ನ ಕೆನ್ನೆಗೆ ಮುತ್ತಿಕ್ಕೋಕೆ ಬಂದ್ರು— ನಾನೇನು ಮಾಡಿದೆ ಗೊತ್ತೊ ?—ನೀವೆಲ್ಲಿದ್ರಿ ಆವಾಗ ?"

"ನಿಮ್ಮಮ್ಮ ಬಾಳೆಹಣ್ಣು ಕೊಟ್ಟಿರಬೇಕು—ಮೆಲ್ಲಗೆ ಮೆಲ್ಲುತಾ ಇದ್ದೆ ನೇನೊ"

"ಇರಲಿ ಕೇಳಿ, ಇಬ್ಬರೂ ಮುಂದಕ್ಕೆ ಬಗ್ಗಿದರು—ಸರಕ್ಕನೆ ಹಿಂದಕ್ಕೆ ಬಾಗಿಬಿಟ್ಟೆ !"

''ಯಾವಾಗ ?''

"ಆವಾಗ!"

''ಆವಾಗ?"

''ಛೀ! ಇಷ್ಟು ತಿಳಿಯೊಲ್ಲ ? ಕಿವುಡರಿಗೆ ಗುಟ್ಟು ಹೇಳೋದು, ನಿಮಗೆ ಪ್ರೀತಿ ವಿಚಾರ ತಿಳಿಸೋದು ಒಂದೆ!''

''ಏನೋ ಅಪ್ಪ ನಂಗೆ ತಿಳೀಲಿಲ್ಲ. ಹೋಗ್ಲಿ ಬಿಡು, ಮುದುಕನ ಮೇಲೆ ಯಾಕೆ ಬೇಜಾರು?''

''ಅಮ್ಮನಿಗೆ ಹೇಳಬೇಡಿ ನಾನು ಹೇಳ್ದೆ ಅಂತ—''

''ನಂಗೆ ತಿಳಿದರಲ್ಲವೆ ನಾನು ಹೇಳೋದು? ಅದಾಯ್ತಲ್ಲ ಬಿಡು. ಜನ ನಿನ್ನ ಏನೇನು ಕೇಳ್ತಾರೆ?''

''ಏನೇನೊ ಕೇಳ್ತಾರೆ—ಹೆಂಡ್ತಿ ಕೈಲಿ ಹೊಡೆಸಬೇಡ, ಅಂತ ಒಬ್ಬ. ಇನ್ನೊಬ್ಬ, ಹೆಚ್ಚು ಮಸಾಲೆದೋಸೆ ತಿನ್ನೋಕೆ ಕಾಸು ಕೊಡಿಸಪ್ಪ, ಅಂತ. ಮಗದೊಬ್ಬಳು—ಅವಳ ಮರೀದು ಸಿಂಬಳ ತೆಗೀಲಾರಳಂತೆ. ಅದಕ್ಕೆ, ಅವಕ್ಕೆ ನೆಗಡಿ ಬರಿಸಬೇಡಪ್ಪ, ಅಂತ. ಇನ್ನೊಬ್ಬನಿಗೆ ಅವನಿಗೆ ಸಂಬಳ ಹೆಚ್ಚಾಗಿಲ್ಲ. ಅದಕ್ಕೆ ನಾನು ಅವ್ನ ಸಾಹೇಬನಲ್ಲಿಗೆ ಹೋಗಿ ಶಿಫಾರಸು ಮಾಡಬೇಕು. ಒಂದು ವೇಳೆ ಮಾಡಿಯೇನು, ಏನು ದೊಡ್ಡದು! ಆದ್ರೆ ನಂಗೇನು ಕೊಡ್ತಾರೆ ಅಂತೀರ. ಹೊಟ್ಟೆ ಬಿಟ್ಟುಕೊಂಡು ಅವ್ರ ಮಹಡಿ ಮೆಟ್ಟಲು ಹತ್ತಿದ ಶ್ರಮಕ್ಕೆ ? ಏನೂ ಇಲ್ಲ ಅಂದ್ರೆ ! ಒಂದು ಕಪ್ ಕಾಫಿ ಕೂಡ ಇಲ್ಲ. ಹಣ್ಣೊ ಕಾಯಿ ಮಾಡಿಸ್ತಾನೆ-ಅವನ್ನೂ ಹಿಂದಕ್ಕೇ ಹೊತ್ತುಕೊಂಡು ಹೋಗಿಬಿಡ್ತಾನೆ. ನಮ್ಮ ಸುಂಡಿಲಿಗಾದ್ರೂ ತಿನ್ನೋಕೆ ಬಿಡೋಲ್ಲ ಅಂದ್ರೆ."

"ಅಲ್ಲ ಗಣೂ"

"ಏನು ಚಿಕ್ಕಪ್ಪಾಜಿ ?"

"ಡಾಕ್ಟರಿಗೆ ತೋರಿಸಬೇಕಾಗಿತ್ತೊ ! ಈ ಸೀಮೆ–ಮಲೇರಿಯಾ ಜಾಸ್ತಿ ನಿನ್ನ ಹೊಟ್ಟೆ ದೊಡ್ಡದಾಯ್ತು. ಹೊಟ್ಟೇಲಿ ಏನಾದ್ರೂ ಗಡ್ಡೆ ಬೆಳೆದಿದೆಯೊ, ಏನೊ ? ನೋಡಿಸಿವ್ರೆ ?"

"ಏನು ನೀವು ಹೀಗೆಲ್ಲ ಕೆಟ್ಟದ್ದು ನುಡೀತೀರಿ ! ಮಲೇರಿಯ ಸಾಮಾನ್ಯವೆ ! ಛೇ ! ನನಗೆ ನೆನಿಸಿಕೊಂಡ್ರೇ ಭಯ ! ಆ ಛಳಿ ! ಆ ಜ್ವರ ! ನಮ್ಮ ಅಮ್ಮ ಹೇಳಿದ್ಲು ಹಾಲು ಮೈ—ಸುಖವಾಗಿ ಬೆಳೆದ್ರೆ ಹಾಗೆ ಅಂತ. ಅಷ್ಟೆ. ಅಂಥ ಭಾರಿ ಹೊಟ್ಟೆ ಆದೆಯ ? ನನಗೆ ?"

"ಇಲ್ಲ ಸುಮ್ಮನೆ ಹೇಳ್ದೆ. ನೀವು ಬೆಳೆಯೊ ಹುಡುಗರು, ಚೆನ್ನಾಗಿರಬೇಕು. ನಮ್ಮ ಕಾಲ ಆಯಿತು. ನೀನು ಹೇಳಿದ ಹಾಗೆ—ಅಮ್ಮ ತಿಳಿದಿರೋ ಹಾಗೆ, ಅದು ಹಾಲು ಮೈಯೇ ಇರಬೇಕು. ನೀನು ಒಂದೊಂದು ದಿನ ನನ್ನ ಕತ್ತಿಗೆ ನಿನ್ನ ಹೊಟ್ಟೆ–ಮೆತ್ತನ್ನ ಹೊಟ್ಟೆ ಒರಗಿಸಿಕೊಂಡು, ನನ್ನ ಕೊಂಬಿನ ಸಂದೀಲಿ ಕೈ ಆಡಿಸುತ್ತ, ತುರಿಸುತ್ತ ನನ್ನ ಮೈ ಮೇಲೆ ಬಿದ್ದಿದ್ರೆ ನನಗೆಷ್ಟು ಸುಖ ಅನ್ನಿಸುತ್ತೆ ! ಆದರೆ ನಿಮ್ಮ ಅಮ್ಮನ ತೊಡೆ ಮೇಲೆ ಕೂತಿರುತ್ತೀಯಲ್ಲ ಅಷ್ಟು ಹೊತ್ತು—ಅಮ್ಮನ ತೊಡೆ ಜೋಮು ಹಿಡಿಯೋಲ್ಲವೆ ? ಒಂದೊಂದು ದಿವಸ ನನ್ನ ಬೆನ್ನ ಮೇಲೂ ಹತ್ತಿಬಿಡ್ತೀಯ—ಏನು ಮಾಡಬೇಕು ನಿನಗೆ ? ನಿಮ್ಮ ತಂದೇಗೆ ಹೇಳಬೇಕೊ ?"

"ಬೇಡಿ, ಅಪ್ಪಾಜಿ ಬೈತಾರೆ ಅವರಿಗೆ ಗೊತ್ತಾದ್ರೆ."

"ನಾನು ಹೇಳಿಲ್ಲ ಅನ್ನು ; ಆದ್ರೆ ಒಂದೊಂದು ದಿವಸ ನಿನ್ನ ಭಾರಕ್ಕೆ, ನನ್ನ ಬೆನ್ನಿನ ಮುದಿ ಎಲುಬು ಕೂಡ ಕಡ ಕಡ ಅನ್ನುತ್ತವಯ್ಯ ?"

"ಇವತ್ತು ನಾನೊಂದು ಮಾತು ಹೇಳ್ತೀನಿ, ಕೇಳ್ತಿರಾ ?"

"ನನ್ನಪ್ಪ, ಏನೋ ಅದು ?"

"ಇವತ್ತು ಬೆನ್ನಮೇಲೆ ಹತ್ತಿಸಿಕೊಂಡು ನನ್ನ ಕರಕೊಂಡು ಹೋಗಿ—ಮಂಡಿಲ ಮೇಲೆ ಹತ್ತಿದ್ರೆ ಮೈಯೆಲ್ಲ ದಡುಕು. ಎಷ್ಟು ಕಡೆ ಬೀಳಬೇಕು.

ನಿಮಿಷ ನಿಮಿಷಕ್ಕೂ ಜಿದರತದೆ. ಸಾಕಾಗಿ ಹೋಗಿದೆ ನನಗೆ ಆದರ ಸಹ ವಾಸ !"

"ಬಿಟ್ಟು ಬಿಡೋದು ತಾನೆ ಅದನ್ನ! ನಿನ್ನ ತಮ್ಮ ನೋಡು, ಎಂತಹ ಷೋಕುಕಾರ ! ನವಿಲು ಮಡಗನ್ನೆ !"

"ಮೊದಲು ಆರಿಸೋವಾಗ್ಲೆ ಸರಿಯಾಗಿ ಆರಿಸಬೇಕು ಅಂದ್ರೆ—ಹೆಂಡತಿ ಕಟ್ಟಿಗೊಂಡು ಆದಮೇಲೆ ಬಿಡೋಕಾಗತ್ತಾ ? ನಮ್ಮ ಅಯ್ಯನ್ನ ನೋಡಿ ! ಎಷ್ಟೊ ಸರ್ತಿ ಓಡಿ ಹೋಗಿದ್ದರು ಕಾಡಿಗೆ—ಮೂಗು ಹಿಡಿದು ಕೂರೋಕೆ. ಎಳ ಕೊಂಡು ಬಂದ್ಲು ನಮ್ಮ ಅಮ್ಮ. ಆದ್ರೆ ಈ ಸುಂಡಿಲಿ—ಹಾಳಾದ್ದು—ಹೋಗೊಲ್ಲ ಬಿಟ್ಟು. ಇನ್ನೂ ಯಾವದಾದ್ರೂ ಕಟ್ಟಿಕೊಂಡೇನು."

"ಒಂದು ಏರೋಪ್ಲೇನ್ ಮಡಗಿಬಿಡು."

"ಹೌದು ತಾಳಿ, ಈಸರ್ತಿ ದರ್ಬಾರಿನಲ್ಲಿ ಕುಬೇರ ಬಂದಿರ್ತಾನೆ ಅವ್ನಿಗೆ ಹೇಳ್ತೀನೆ ನಿನ್ನ ವಿಮಾನ ನಮಗೆ ಕೊಡು ಅಂತ. ನಂಗೆ ಕೊಡಲಾರನೆ. ಅಯ್ಯ ಹೇಳವ್ರೆ ಅಂದ್ರೆ?"

"ಈ ಲೋಕದ ಜನಗ್ಳೂ ವಿಮಾನ ಮಾಡಿದಾರೆ?"

"ಹೌದು, ಗುಂಗಾಡು ಗುಂಯ್ ಅಂದ ಹಾಗೆ ಆಗುತ್ತೆ. ಇವೇನೊ ಯುದ್ಧಮಾಡ್ತಾ ಇವೆಯಂತೆ—ಇರುವೆಗ್ಳ ಯುದ್ಧ ಅಂದ್ರೆ. ಅಲ್ಲಿ ಇವನ್ನು ಹಾರಾಡಿಸೋದು ಬಹಳ ಅಂತೆ. ನಾನು ಎಂದೋ ಒಂದು ದಿವಸ ಪೇಪರ್ ನೋಡಿದೆ; ಅದರಲ್ಲಿತ್ತು."

"ಅವರ ಯುದ್ಧ ನಿನ್ನ ಕಣ್ಣಿಗೆ ಕಾಣಿಸೋಲ್ಲವೆ"

"ನಂಗೆ ಕಾಣಿಸೋದು ನನ್ನ ಹೊಟ್ಟೆ ಒಂದೆ—ಕೆಳಗೆ ನೋಡಿದ್ರೆ; ಮೇಲೆ ನೋಡಿದ್ರೆ ನಮ್ಮ ತಂದೆ ಪಾದ. ಎಲ್ಲೋ ಕಚ್ಚಾಡ್ತಿರಬೇಕು. ಯಾರು ಹಾಗೆ ಬಗ್ಗಿ, ಹೊಟ್ಟೆ ನೋವು ತಂದುಕೊಂಡು ಕಣ್ಣುರಿಸಿಕೊಂಡು ನೋಡ್ತಾರೆ? ಅಂತೂ ಏನೇನೊ ಮಾತು ಎತ್ತಿ ನಾನು ಕೇಳಿದ್ದನ್ನು ಮರೆಸಿ ಬಿಟ್ರಲ್ಲ!"

"ಏನಯ್ಯ ನೀನು ಕೇಳಿದ್ದು? ಬಾಳೆಹಣ್ಣೆ?"

"ಅಲ್ರೀ! ನನ್ನ ಇವತ್ತು ಹತ್ತಿಸಿಕೊಂಡು ಕರಕೊಂಡು ಹೋಗ್ರೀ ಅಂದ್ರೆ? ಅಮ್ಮ—ಚಕ್ಕುಲಿ ಕೋಡುಬಳೆ ಮಾಡ್ತೀನಿ ಜಾಗ್ರತೆ ಬಾ; ಇಸ್ಪೀಟು ಆಡೋಕಾಗ್ಲೀ, ಸಿನೀಮಾ ನೋಡೋಕಾಗ್ಲೀ, ಬೀದಿ ಅಲೆಯೋಕಾಗ್ಲೀ ಹೋಗಬೇಡ. ಸಂಜೆ ಆಗತ್ಲೂ, ಸೀದಾ ಮನೆಗೆ ಬಾ ಅಂದಿದ್ಲು. ನಾನು ಅತ್ತು ಬಿಡ್ತೀನಿ ನೀವು ಬಿಟ್ಟುಹೋದ್ರೆ ಕತ್ತಲಲ್ಲಿ"

"ಅಲ್ಲಯ್ಯ? ಸ್ವಾಮಿ ಮುಹೂರ್ತ ಮಾಡೊ ಜಾಗದಲ್ಲಿ ನೀನು ಕೂಡಬ ಹುದೆ? ಅವರಿಗೆ ತಿಳಿದರೆ ಸುಮ್ಮನೆ ಬಿಟ್ಟಾರೆ ನಿನ್ನನ್ನೂ ನನ್ನನ್ನೂ?"

"ಹೇಳೋದೆ ಬೇಡ"

"ಕತ್ತಲಲ್ಲಿ ಒಬ್ಬನೆ ಹೇಗೆ ಬಂದೆ ಅಂದ್ರೆ?"

"ಹೇಳ್ತೀನಿ, ಅಮ್ಮ ಚಕ್ಕುಲಿ ಮಾಡ್ತೀನೆ ಅಂತಿದ್ಲು. ಅದಕ್ಕೆ ಆಫೀ ಸಿಗೆ ನಾನು ಹೋಗ್ಲಿಲ್ಲ. ಮನೇಲೆ ಇದ್ದುಬಿಟ್ಟೆ, ಅಂತ"

"ನೋಡು, ನೀನು ಹುಡುಗ. ನಿನ್ನ ಮಾತು—ಏನೊ ಹುಡುಗನ ಮಾತು ಅಂದುಕೊಂಡು ಸುಮ್ಮನಾದಾರು. ಮುದುಕ ಆಗೋತನಕ, ಕಣ್ಣು ಮಂಜು ಆಗೋತನಕ, ಬೆನ್ನು ಬಾಗೋತನಕ, ಸರ್ವಿಸ್ ಮಾಡಿದ್ದೇನೆ; ಒಂದು ದಿನ ಸುಳ್ಳು ಹೇಳಲಿಲ್ಲ ದಣಿ ಹತ್ರ. ಈಗ ನೀನು, ಸುಳ್ಳು ಹೇಳಬೇಕು ಅಂತೀಯ?"

"ಹೋಗ್ಲಿ ಬಿಡಿ, ನಾನೊಬ್ನೆ ಹೋಗ್ತೀನೆ ರಾತ್ರಿ ಕಪ್ಪೆ ಕೈಲಿ ಕಚ್ಚಿಸಿ ಕೊಂಡು, ಚಿಟ್ಟೆ ಕೈಲಿ ಪರಚಿಸಿಕೊಂಡು."

"ಅಸಾಸೂರನಯ್ಯ ನೀನು! ನಿನ್ನ ತಮ್ಮನ್ನ ನೋಡಬಾರದೆ? ಏಳು ದಿನದ ಕಂದಮ್ಮ—ಕೊಂದ ಆರಾಕ್ಷಸರನ್ನ!"

"ಬಿಡಿ, ಮಹಾ! ಅಷ್ಟೊಂದು ಜನ ಹಿಂದಿದ್ದಾಗ ಮಹಾ ಶೂರತನ! ತ್ರಿಪುರಾಸುರ ದಹನದ ಕಾಲದಲ್ಲಿ ನಮ್ಮ ಅಪ್ಪನ ಕುದುರೆ ಗಾಡಿ ನಿಲ್ಲಿಸಿ ಬಿಟ್ಟೆ!"

"ಸರಿಯಪ್ಪ!"

"ಅದಿರಲಿ, ಹತ್ತಿಸಿಕೊಂಡು ಹೋಗ್ತಿರೊ? ಇಲ್ಲೇ ಬೆಂಗಳೂರು ಚಳೀಲಿ ನರಳೋ ಹಾಗೆ ಮಾಡ್ತೀರೊ?"

"ಆಗ್ಲಿ, ಬಾ ಅಪ್ಪ. ಭಾರಬಿಡಬೇಡ—ಬೆನ್ನು ನೋಯುತ್ತೆ"

"ನೀವು, ನಾನು ಚೆನ್ನಾಗಿ ಹತ್ತಿ ಕೂತ್ಕೊಳ್ಳೊ ತನಕ ಮೇಲೇಳ ಬಾರದು. ನೀವುಗಾನ ಬೀಳಿಸಿದ್ರೆ— ಅಮ್ಮನಿಗೆ ಹೇಳ್ತೇನೆ"

"ಈಗ ಹೇಳ್ದೆ, ಯಾರಿಗೂ ಹೇಳಬೇಡ ಅಂತ?"

"ಅಯ್ಯೊ! ಮರತೆ ಅಂದ್ರೆ! ಚಿಕ್ಕಪ್ಪಾಜಿ! ಮೆಲ್ಲಗೆ ಕರಕೊಂಡು ಹೋಗಿ ..... ........ಚಿಕ್ಕಪ್ಪಾಜಿ ! ಬೆನ್ನು ನೋಯುತ್ತ?"

"ಕಾಲು, ಮೈ, ಎಲ್ಲ ನೋಯುತ್ತೆ"

"ನಾನು ಮೈ ತಿಕ್ಕೋದು ಕಲೀಲಿಲ್ಲ. ನಮ್ಮ ಇಸ್ಕೂಲಲ್ಲಿ ಮೇಡಂ ಹೇಳಿಕೊಟ್ಟಿಲ್ಲ!"

"ನೀನು ಯಾವ ಸ್ಕೂಲಿಗೆ ಹೋಗಿದ್ದೆಯಯ್ಯ?"

"ನಮ್ಮ ಅಮ್ಮಂದೆ ಸ್ಕೂಲು. ಅಮ್ಮನೆ ಮೇಡಂ. ಒಂದು ದಿವ ನಾನೂ ಹೊಡೀಲಿಲ್ಲ. ನೀವು ನಿಮ್ಮ ಅಮ್ಮನ ಹತ್ತಿರ ಪಾಠ ಕಲಿತಿದ್ದಿರಾ?"

"ಇಲ್ಲ, ಸ್ವಾಮಿ ಹತ್ತಿರ ಕಲಿತೆ"

"ನಮ್ಮ ಅಯ್ಯ ಒಳ್ಳೆಯವರಲ್ಲವೆ?"

"ಹೌದು.......ಈವಾಗ ನಾನು ಮನೇಗೆ ಹೋದಕೂಡಲೆ ಎಣ್ಣೆ ಹಚ್ಚಿ ಮೈನೀವಿ, ಕಾಲುಜ್ಜಿ, ಬಿಸಿನೀರು ಹಾಕ್ತಾರೆ. ನೀನು ಒಂದು ದಿವಸವಾದ್ರೂ ನಿನ್ನ ಇಲಿಗೆ ಹಾಗೆ ಮಾಡಿದ್ದೀಯ?"

"ಛೀ! ಅದು ಇಲಿ. ನೀವು ನಮ್ಮ ಅಯ್ಯನಿಗೆ ತಮ್ಮ. ನಿಮಗೂ ಅದಕ್ಕೂ ಒಂದೇನೆ!"

"ಮನೆ ಬಂತು. ಮೆಲ್ಲಗೆ ಇಳಿ—ಮಾತಿನಲ್ಲಿ ಗೊತ್ತೆ ಆಗಲಿಲ್ಲ. ಅಲ್ಲಿ ನೋಡು ಅಯ್ಯ ಅಮ್ಮ ನಿಂತವ್ರೆ"

"ಅಪ್ಪಾಜಿ ರೇಗವ್ರೊ ಏನೊ!"

"ನನ್ನ ಹೊಟ್ಟೆ ಕೆಳಗೆ ಅಡಗಿಕೊ"

ಪ್ರಮಥರಿಬ್ಬರೂ ನಕ್ಕರು. ದೇವತೆಗಳು ನಕ್ಕಾಗ ಹೀಗೂ ಆಗಬಹು ದಲ್ಲವೆ?

# ಎಲ್ಲಿ ಹೋದನ್ರೀ ನಮ್ಮ ಹುಡುಗ ?

ಉಂಡು ಆಡುತ್ತಿದ್ದ ಮಗ, ಗೌರಮ್ಮನ ಮುದ್ದು ಮಗ, ಶಾಂತಪ್ಪನ ಕಿರೇಮಗ ಏಕಾಏಕಿ ಪರಾರಿ. ಎಲ್ಲಿ ಹೋದನ್ರೀ ನಮ್ಮ ಹುಡುಗ? ಎಲ್ಲಿ ಹೋದನ್ರೀ ನಮ್ಮ ಹುಡುಗ ? ಇದೇ ಪ್ರಶ್ನೆ; ಇದೇ ಸಂಕಟ; ಇದೇ ಗೋಳು.

ಶಾಂತವೀರಪ್ಪನಿಗೆ ಗಂಟಿತ್ತು. ಎತ್ತಿಕೊಂಡು ಹೋಗುವ ವಯಸ್ಸೆ ? ಆದಲ್ಲ ಮಗನದು. ಹರೆಯ ತುಳಕಿ ಬಂದಿತ್ತು....ಹೆಣ್ಣಿನ ಜಾಡು ಹಿಡಿದ ಹೋದನೆ ! ಛೆ ! ಅರಿಯುದ ಕಂದಮ್ಮ ! ಗೌರಮ್ಮನ ಮಗ !

ಹುಡುಗನ ಗತಿ ಏನಾಯಿತ್ರಿ ! ಈ ದಂಪತಿಗಳ ಸಂಕಟ ನೋಡಲಿಕ್ಕಾಗದು. ಹುಡುಗ ಚಿಕ್ಕಕೂಸಿನಲ್ಲೆ ಚೆಲುವನಿದ್ದ. ಆದರೆ ಆ ಚೆಲುವು ವಯಸ್ಸಿಗೆ ಬರುವ ತನಕ ನಷ್ಟವಾಗದಿತ್ತು, ಎಂದು ಭಾವಿಸೀರಿ. ನಾಜೋಕಿನಲ್ಲಿ ಬೆಳೆಯದ ಹುಡುಗರು ಹೇಗೋ ಇರುತ್ತಾರೆ ಆದರೂ ಪರವಾಯಿಲ್ಲ. ಸ್ವಲ್ಪ ಸದೃಢನಾಗಿದ್ದ. ಈಜು ಬಲ್ಲ. ಗಾಡಿ ಹೊಡೆಯಲು ಬಲ್ಲ. ಬೀಡಿ ಸೇದುವುದು ಕಲಿತಿದ್ದನೊ ಇಲ್ಲವೊ ಅವನನ್ನೆ ಕೇಳಬೇಕು. ಆದರೆ ಅವನಿದ್ದರಲ್ಲವೆ ಕೇಳುವುದು. ಲೋಯರ್ ಸೆಕೆಂಡರಿಗೆ ಎರಡುಬಾರಿ ಕೂತ. ಅಪ್ಪ, ವಿದ್ಯೆ ಬೇಡ ಎಂದು ಗಾಡಿ ಹೊಡೆಯಲಿಕ್ಕೆ ನೇಮಿಸಿದ್ದ. ಆಗಾಗ್ಗೆ ಕಿರಾಣಿ (ದಿನಸಿ) ಅಂಗಡಿಯಲ್ಲಿ ಕೂತು ತನಗೆ ಬುದ್ಧಿ ತೋರಿದಂತೆ ವ್ಯಾಪಾರ ಮಾಡುತ್ತಿದ್ದ.

ಹುಡುಗ ಜಾಣನೆ?–ಅಲ್ಲ. ತಿಳುವಳಿಕೆಯುಳ್ಳವನೆ? ನೀವು ಹಾಗೆಂದು ಹೇಳಲಾರಿರಿ. ಅಮ್ಮ ಹೊಡೆದರೆ ಹೊಡೆಸಿಕೊಳ್ಳುತ್ತಿದ್ದ. ಅಪ್ಪನಿಗೆ ಹೆದರಿ ದೂರವಿರುತ್ತಿದ್ದ. ಇಂಥ ಸಾಧು, ಸಭ್ಯ ಸುಪುತ್ರ ಒಂದೇಬಾರಿ ತಟಕ್ಕನೆ ಕಣ್ಣು ಮರೆಯಾದರೆ ಪ್ರೇಮದ ತಂದೆತಾಯಿಗಳ ಎದೆ ಏನಾಗಬೇಕು?

ಸಣ್ಣಿಗೆ ಅಪ್ಪ ಹೆಣ್ಣು ನೋಡಿದ್ದ; ತಮ್ಮ ತಾಯಿ ಕಡೆಯಲ್ಲಿ. ಒಂದೆರಡು ಸಾರಿ ಬೀಗರು ಬರುವುದು, ಹೋಗುವುದು ಆಗಿತ್ತು. ಇನ್ನೇನು ದಿನ ಒದಗಲಿ ನಿಶ್ಚಯಕ್ಕೆ ಅನ್ನೋಹೊತ್ತಿಗೆ ಈ ಮುರಾರಿ—ಪರಾರಿ.

ಶಾಂತಪ್ಪ ಜೋಯಿಸ ನೋಡಿಸಿದ—ಮಗನೆಲ್ಲಿ? ಯಾವಾಗ ಬರುತ್ತಾನೆ? ಅದೇನಾದ್ರೂ ಆಗಲಿ. ಜೀವದಿಂದಿದ್ದಾನೊ? ಇತ್ಯಾದಿ ಪ್ರಶ್ನೆಗಳ ಬಗ್ಗೆ.

ಪ್ರಶ್ನೆಯಲ್ಲಿ ಹೊರಟಿತು, ಉತ್ತರದಲ್ಲಿದ್ದಾನೆ; ಜೀವನಕ್ಕೆ ಕಷ್ಟ; ಶ್ರಮನೂಡಿ ಊಟಮಾಡಬೇಕು. ಪ್ರಾಣಕ್ಕೆ ನಷ್ಟವಿಲ್ಲವೊ? ಇರಲಾರದು! ಯಾವಾಗ ಬರುತ್ತಾನೆ–ಎಂಬುದಕ್ಕೆ ಜೋಯಿಸನಿಂದ ಉತ್ತರ ಬರಲಿಲ್ಲ. ಆದರೆ ಪ್ರಯತ್ನ ಮಾಡಿ, ಎಂದ ಮಾತ್ರ.

ಬಲು ದುಗುಡ ಹತ್ತಿಕೊಂಡಿತು. ಊರವರೆಲ್ಲ ಸಹಾನುಭೂತಿ ತೋರಿದರು. ಶಿವಮುಖ, ಬೆನ್ನೂರು, ದೇವಸೂರು, ಸಮುದ್ರದೂರು, ಏರಿ ಕೆಳಗೆ, ಕೆರೆ ಮೇಲೆ, ಹಳ್ಳದ ತಡಿಯಲ್ಲಿ ಎಲ್ಲಾ ಕಡೆ ಹುಡುಕಿದರು, ಹುಡುಕಿಸಿದರು. ಎಲ್ಲಿ ಸಿಕ್ಕಬೇಕು? ಕೆಲವು ವಯಸ್ಸಿನವರು, 'ಎಲ್ಲಿ ಹೋದನಲೆ ಈ ಮಂಗ್ಯ!' ಎಂದರು. ಗೌರಮ್ಮ ಈ ಮಾತು ತಿಳಿದು ಜಗಳಕ್ಕೆ ಹೋದಳು–ತನ್ನ ಮಗನಿಗೆ ಮಂಗನೆಂದಿದ್ದಕ್ಕಾಗಿ.

ಆಗ ಕಾಲ ಬಲು ತೀವ್ರವಾಗಿತ್ತು. ಮಹಾತ್ಮರು ಉಪ್ಪಿನ ಸತ್ಯಾಗ್ರಹ ಹೂಡಿ,"ಪ್ರಾಣಹೋದರೂ ಸರಿ!" ಎಂದು ಸ್ವಾತಂತ್ರ್ಯ ತರಲು ಆಶ್ರಮ ಬಿಟ್ಟು ಚಳುವಳಿಗಾಗಿ ಹೊರಟಿದ್ದರು. ದಂಡಿ! ಧಾರಸಾನ! ವಡಾಲ! ಈ ಹೆಸರುಗಳು ಮೈರೋಮಗಳನ್ನು ನಿಮಿರಿ ನಿಲ್ಲುವಂತೆ ಮಾಡುತ್ತಿದ್ದವು. ಸತ್ತವರು! ಜೈಲು ತುಂಬಿದವರು! ಅಂಗಾಂಗಗಳನ್ನು ಕಳೆದುಕೊಂಡವರು! ಹೆತ್ತವರು,

ಹೊತ್ತವರು, ಅಣ್ಣತಮ್ಮಂದಿರು !.... .....ಎಂಥ ಉದ್ವೇಗ ಪರಿಸ್ಥಿತಿ ! ದೇಶ ಪ್ರೇಮಿಗಳು ಕಠೋರಧ್ವನಿಯಿಂದ ಕೂಗಿದರು, ''ನಮಗೆ ಸ್ವಾತಂತ್ರ್ಯ ಬಂದೇ ಬರುವುದು !'' ಎಂದು. ಎಲ್ಲರೂ ಹಾಗೇ ತಿಳಿದಿದ್ದರು. ದೇಶವಾದ್ಯಂತ ಎಲ್ಲೂ ಇಲ್ಲದ ನಿರ್ಧಾರ, ಆತ್ಮಗೌರವ, ಭರವಸೆ ತುಂಬಿದವು; ತುಳುಕಿದವು ಆಹ! ಸ್ವಾತಂತ್ರ್ಯದ ಕಲ್ಪನೆಯೇ ಇಂಥ ಉತ್ಸಾಹವನ್ನು ತರುವುದಾದರೆ, ಸ್ವಾತಂತ್ರ್ಯ ಲಭ್ಯವಾದಾಗ ಇವರೆಷ್ಟು ಸುಖಿಗಳಾದಾರು !

ಸಾಯುವ ವೃದ್ಧ, ''ನನ್ನ ಪ್ರಾಣ ಇನ್ನು ಕೊಂಚ ದಿನ ಎಳೆಯಲಿ; ನನ್ನ ದೇಶದ ಸ್ವಾತಂತ್ರ್ಯ ನೋಡಿ ಸಾಯುತ್ತೇನೆ" ಎಂದನು. ಈ ಊರಿನ ತಿಳಿಯದ ಮುದುಕಿ, ''ಗಾಂಧಿ ಕಚೇರಿ ಕೆಡಿಸಿದನಂತೆ; ನಮ್ಮ ಜನ ದೌಲತ್ತು, ಮಾಡುತ್ತಾರಂತೆ,'' ಎನ್ನುವಳು. ''ನಹಿರಕನ, ನಹಿರಕನ''.....ಎಂಬ ಹಾಡು ನಿಷೇಧವಾಗಿದ್ದರೂ, ಎಲ್ಲೆಲ್ಲೂ ಕೇಳಿಸುವುದು. ಹೊಟ್ಟೆಯುರಿಯಿಂದ ಜನ, ಹೆಣ್ಣು, ಗಂಡು ಎಲ್ಲರೂ ಇದನ್ನೇ ಹಾಡುವರು.

ಸತ್ಯಾಗ್ರಹಿಯಿಂದ, ಕಾನೂನು ಭಂಗಮಾಡಿ ತಂದ ಉಪ್ಪಿನ ಹರಳೊಂದನ್ನು ಒಬ್ಬ ವರ್ತಕ ೪೦ ರೂಪಾಯಿಗೆ ಕೊಂಡು ಊರವರಿಗೆ ತೋರಿಸಿದ. ಈ ಊರಿನವರು ಒಂದೇ ಬಾರಿಗೆ ಖಾದೀ ಪ್ರೇಮಿಗಳಾದರು ತರುಣರ ತಲೆ ಕೆಟ್ಟುಹೋಯಿತು. ಒಂದು ಪತ್ರಿಕೆ ಒಬ್ಬರ ಮನೆಗೆ ಬಂದರೆ ಮೂವತ್ತು ಜನ ಕೂತು ಓದಿಸಿ ಕೇಳುವರು; ಕೇಳಿ ಉಸುರು ಕರೆವರು. ತ್ಯಾಗಿಗಳ ಕಥೆ ಕೇಳಿ—ಪುಣ್ಯಾತ್ಮರೆನ್ನುವರು.

ಶಾಂತವೀರಪ್ಪನಿಗೆ ಮನಸ್ಸಿಗೆ ಆಗಾಗ ಬಾಧಿಸುವುದು—ತನ್ನ ಮಗನೂ ಚಳುವಳಿಗೆ ಸೇರಿದನೊ? "ಆದರೆ ಈ ಬೆಪ್ಪು, ಚಳುವಳಿ ಏನು ಮಾಡುತ್ತಾನೆ?" ಜೋಯಿಸ ಹೇಳಿದ್ದ—"ಉತ್ತರ ದೇಶದಲ್ಲಿ; ಅನ್ನಕ್ಕೆ ಕಷ್ಟ........" ಇರಬಹುದು ! ಜೈಲಿನಲ್ಲೊ, ಎಲ್ಲೊ. ಕೈಕಾಲು ಮುರಿದು ಕೊಂಡಿದ್ದರೆ ಏನುಗತಿ? ಗೌರಮ್ಮ-ಕಿರಿಯಮಗ-ತಲೆಯಲ್ಲಿ ಬಿಳಿ ಕೂದಲು ಕಾಣಿಸುವಾಗ ಹೆತ್ತಳು-ಈಗ ಮುದುಕಿ; ಅಳುತ್ತಾಳೆ. ಉಳಿದ ಮಕ್ಕಳು ಇವಳನ್ನು ಗದರಿಸಿಕೊಳ್ಳುವರು. ಕೇಳಿದ ಹೆಂಗಸು ಹೊಟ್ಟೆಯ ಅಳಲಿನಿಂದ

"ಪಾಲಿಗೊಬ್ಬ ಕಡಿಮೆಯಾದನೆಂದು ನಿಮಗೆ ಸಮಾಧಾನ ಏನ್ರೊ ?" ಎಂದು ಕೆಟ್ಟ ಮಾತಾಡುವಳು.

ಇವರ ಊರು, ಗಡಿ ; ಬ್ರಿಟಿಷ್ ಪ್ರಾಂತದಿಂದ ಜನ ಬಂದು ಹೋಗುವುದು. ಚಳುವಳಿಗಾರರು ತಲೆಮರೆಸಿಕೊಂಡು ಗಡ್ಡಮೀಸೆ ಬಿಟ್ಟು ಅಲ್ಲಲ್ಲಿ ಸಂಚರಿಸುವುದೂ ಉಂಟು. ಅವರೊಂದಿಗೆ, ಈತ, ತನ್ನ ಮಗನನ್ನು ನೋಡಿದ್ದರೆ ಕಳಿಸಿಕೊಡಿ, ಎಂದು ಅಂಗಲಾಚುವನು. ತನಗೆ ತಿಳಿದವರಿಗೆಲ್ಲ ಪತ್ರ ಬರೆಯುವನು. ಊರಿನ ಜನಕ್ಕೆ ಇವರ ಚಪಲ ನೋಡಿದರೆ ಆಗದು. "ಏನು ಕೂಸೇ ? ಹೋದವ ಬರ್ತ್ತಾನೆ !" ಎನ್ನುವರು.

ಆ ಕಾಲದ ಕಾವಿನುಬ್ಬರದಲ್ಲಿ ಎಲ್ಲರೂ ತ್ಯಾಗಿಗಳ ಬಗ್ಗೆ ಮಾತನಾಡುತ್ತಾ ಆದರ ತೋರುವಾಗ, ಅಂಥ ತ್ಯಾಗಿಗಳು ಬಂದರೆ ಗೌರವಿಸುವಾಗ, ಏಕಾಂಗಿಯಾಗಿ, ಈ ವಿಸ್ತಾರ ಸಾಗರಾವೃತವಾದ ಹಿಂದೂ ಭೂಖಂಡದಲ್ಲಿ ಏನೂ ಪ್ರಚಾರವಾಗದೆ, ಮೌನವಾಗಿ, ದೇಶಸೇವೆಗಾಗಿ ಅಡಗಿಹೋದ ಸಣ್ಣಿ-ಸಣ್ಣಪ್ಪ-ಸಣ್ಣತಮ್ಮಣ್ಣನ ಬಗ್ಗೆ ಜನತೆ ತತ್‌ಕ್ಷಣದಲ್ಲೆ ಅಪೂರ್ವ ಗೌರವವನ್ನು ತಾಳಿತು.

ಅಕೋಲಾ ಜೈಲಿನಲ್ಲಿದ್ದವನೊಬ್ಬ ಅಹಮದ್ ನಗರದಲ್ಲಿ ಸೇರ್ಪಡೆಯಾದಾಗ ಕರ್ಣಾಟಕದ ಸತ್ಯಾಗ್ರಹಿಯೊಬ್ಬನನ್ನು ಕಂಡ ಹಾಗೂ, ಅವನಂಥ ಸತ್ಯಾತ್ಮ, ಅಹಿಂಸಾವ್ರತಿ ವಿರಳ, ಅತೀವ ವಿರಳ ಎಂದು ಉದ್ಗಾರ ತೆಗೆದ ಹಾಗೂ, ಈ ಬಾಲಯೋಧನ-ಸತ್ಯಾಗ್ರಹಿಯ ಚಹರೆ ನಮ್ಮ ಸಣ್ಣಿಯನ್ನೆ ಕೇವಲ ಹೋಲುತ್ತಿದ್ದ ಹಾಗೂ, ಕರ್ಣಾಕರ್ಣಿಕೆಯಾಗಿ ಸುದ್ದಿ ಇವನ ತೌರೂರಿಗೆ ಬಂದು ಬಡಿಯಿತು.

ಜನ ಚಕಿತರಾದರು ! ತಮ್ಮ ಊರಿನವನೊಬ್ಬ ಚರಿತ್ರೆಯಲ್ಲಿ ಹೆಸರನ್ನು ಸ್ಥಿರಪಡಿಸಿದವನಾದ ; "ಸ್ವಾತಂತ್ರ್ಯ ಸಮರಕ್ಕೆ ಕರೆ ಬಂದಾಗ ಸಡ್ಡು ಹೊಡೆದು ಧುಮಿಕಿದ!" "ಯಾವ್ಯಾವ ವರ್ತಮಾನ ಪತ್ರದಲ್ಲಿ ಅವನ ಹೆಸರು ಬಂದಿತ್ತೊ! ಛೇ, ನಾವು ನೋಡಲೇ ಇಲ್ಲವಲ್ಲ!" ಎಂದು ಜನ ಮಿಡಿದರು.

ಅಭಿಮಾನವೆಂಬುದು ಜೀವಮಾನದಲ್ಲೆ ಹತ್ತಿರ ಬಾರದಿದ್ದ ತಂದೆತಾಯಿ

ಗಳು ಅಭಿಮಾನದಿಂದ ಮೈಯುಂಡರು—ತಮ್ಮ ಮಗ ತನಗೂ, ತಮಗೂ, ತಮ್ಮ ಊರಿಗೂ ಕೀರ್ತಿ ತಂದನೆಂದರು.

ಸ್ವಾತಂತ್ರ್ಯ ಬರಲಿಲ್ಲ ಯುದ್ಧಮಾಡಿ ಜೇಸತ್ತಂತೆ ಜನಕ್ಕೆ ಆಗಿತ್ತು. ಗಾಂಧಿ-ಇರ್ವಿನ್ ಒಪ್ಪಂದ .....ಜನ ವಿರೋಧಿಸಲಿಲ್ಲ. ಅಂತೂ ಕೊನೆ ಯಾಯಿತಲ್ಲ! ಎಂದು ಜನ ಸಮಾಧಾನ ತಳೆದರು. ಒಪ್ಪಂದವಾಗಿಯೂ ಹೋಯಿತು. ಗಾಂಧಿಯವರು, "ಉಭಯಪಕ್ಷಕ್ಕೂ ಈ ಒಪ್ಪಂದ ಅಪಮಾನ ಕಾರಿಯಲ್ಲ," ಎಂದರು ಜೈಲಿನಿಂದ ಜನ ಬಂದಿತು. ಅತ್ಯಂತ ಉತ್ಸಾಹ ದಿಂದ ಅವರಿಗೆ ಸ್ವಾಗತ ನಡೆಯಿತು. ಅವರವರ ಊರುಗಳಲ್ಲಿ ಈ ತ್ಯಾಗಿ ಗಳನ್ನು ಸ್ವಾಗತಿಸಿದರು; ಆರತಿ ಎತ್ತಿಸಿದರು; ಆಲಿಂಗಿಸಿ, ಸಭೆ ಸೇರಿಸಿ ಗೌರವಿಸಿದರು.

ಈ ಊರಿಗೆ ಆ ಉತ್ಸವ ಲಭ್ಯವಾಗಲಿಲ್ಲ. ಸ್ವಾತಂತ್ರ್ಯ ಸಾಧಿಸಲು ಇಲ್ಲಿಂದ ತೆರಳಿದ್ದ ವೀರಯೋಧ, ಕಾಂಗ್ರೆಸ್ ಶಿಪಾಯಿ ಬರಲಿಲ್ಲ. ತಂದೆ ತಾಯಿಗಳಿಗೆ ನಿರುತ್ಸಾಹವೆನಿಸಿತು.

ಜನಗಳಿಗೆ ಸಮಾಚಾರ ಹೇಗೆ ಗೊತ್ತಾಗುವುವೂ ತಿಳಿಯದಲ್ಲ! ಅರ ಮನೆಯಲ್ಲಿನ ಒಳಮನೆಯ ಸಮಾಚಾರವನ್ನಾದರೂ ಕೇಳಿ, ಸೆರೆಮನೆಯ ಕೆಳ ಅಂಗಳದ ಮಾತನ್ನಾದರೂ ಕೇಳಿ-ಕಂಡು ತಿಳಿದುದಕ್ಕಿಂತ ವಿವರವಾಗಿ ಹೇಳುವರು.

ಸಣ್ಣಪ್ಪನ ವಿಚಾರ ಇನ್ನೂ ವಿವರಗಳು ಬರತೊಡಗಿದವು. ವಾರ್ಧಾ ಗಂಜ್ ಹತ್ತಿರ ಗಾಂಧಿಯವರು ನೆಲೆಸಿ ತಮ್ಮ ಪರಿವಾರವನ್ನು ಹತ್ತಿರಿಟ್ಟು ಕೊಂಡರು. ಅವರು ಹಿಂದೆ ಮಾಡಿದ ಪ್ರತಿಜ್ಞೆಯ ಪ್ರಕಾರ ಸ್ವಾತಂತ್ರ್ಯಗಳಿ ಸದೆ ಸಬರಮತಿಗೆ ಹೋಗುವಂತಿರಲಿಲ್ಲ. ನಮ್ಮೂರ ಸಣ್ಣ-ಛೆ! ಈಗ ಹಾಗನ್ನ ಲಾದೀತೆ?—ಸಣ್ಣತಮ್ಮಣ್ಣಪ್ಪನವರು—ಭಾಯೀ ಸಣ್ಣತಮ್ಮಣ್ಣಪ್ಪನವರು ಈಗ ಮಹಾತ್ಮರ ಹತ್ತಿರವೇ ಇರುತ್ತಾರೆಂದು ಜನ—ಅಲ್ಲಿ ನೋಡಿದ್ದವರಿರ ಬಹುದು!—ತಿಳಿಸತೊಡಗಿದರು. ಪ್ರಾರ್ಥನಾಕಾಲಕ್ಕೆ ಮಹಾತ್ಮರ ಪಕ್ಕದಲ್ಲೆ ಈ ತರುಣ ಸತ್ಯಾಗ್ರಹಿ ಕೂತಿರುತ್ತಾರೆ. ಅದೆಂಥ ತೇಜಸ್ಸು ಅವರ ಮುಖದ

ಮೇಲೆ! ಭಾರತಮಾತೆ ಅವರ ಮುಖದಮೇಲೆ ತನ್ನ ಕಳೆಯನ್ನೆಲ್ಲಾ ತುಂಬಿದ್ದಾಳೆ. ಶುಭ್ರವಾದ ಉಡುಪು, ಗಾಂಧೀಟೋಪಿ, ಸೌಮ್ಯಮುಖ ಛಾಯೆ, ಎಂತಹ ಕರ್ಮಯೋಗಿ ಈ ತರುಣ!

ಇನ್ನೊಂದು ಸುದ್ದಿ–ಮಹಾರಾಷ್ಟ್ರದ ಪ್ರಸಿದ್ಧನಾಯಕ, ಕಾಕಾ ಕಾಷ್ಲೇಕರ್ ಅವರು ತಮ್ಮ ಏಕಮಾತ್ರ ಪುತ್ರಿಯನ್ನು ಇವರಿಗೆ ಕೊಡುತ್ತಾರೆ, ಎಂದು ಉತ್ಸಾಹದ ಸುದ್ದಿ. ಈ ಅಂತರ ಪ್ರಾಂತೀಯ ವಿವಾಹದಿಂದ ಕರ್ಣಾಟಕ ಮಹಾರಾಷ್ಟ್ರಗಳ ನಡುವೆ ಸೌಹಾರ್ದ ಹೆಚ್ಚುವುದು, ಎಂದೂ ವರ್ತಮಾನ.

ತಂದೆತಾಯಿಗಳಿಗೆ ದಿಗ್ಭ್ರಮೆ—ಯಾವುದೋ ಜಾತಿ, ಯಾವುದೋ ಮಾತನಾಡುವ ಸೊಸೆ ತಮಗೆ ಪ್ರಾಪ್ತಳಾದಳಲ್ಲ! ಎಂದು. ಆದರೆ, ಶಿವಭಕ್ತರಲ್ಲಿ ಕುಲವನರಸಲಾಗದು ಎಂಬ ಬಸವಣ್ಣನವರ ಮಾತನ್ನು ಯಾರೋ ಇದಕ್ಕೂ ಅನ್ವಯಿಸಿ ದೇಶಭಕ್ತರಲ್ಲಿ ಕುಲವನರಸುವುದೇ? ಎಂದು ಹೇಳಿದರು. ಏನೋ ಇವರೆಲ್ಲ ಸುಧಾರಿಸಿದ ಕಾಂಗ್ರೆಸ್ ಜನ; ಏನಾದ್ರೂ ಆಗ್ಲಿ; ಸಣ್ಣ ಎಲ್ಲಾದ್ರೂ ತಣ್ಣಗೆ ಬದುಕಿದ್ದರೆ ಸಾಕು, ಎನ್ನುತ್ತ ಸುಮ್ಮನಿದ್ದರು. ಕಾಗದ ಬರೆಯಬಹುದಾಗಿತ್ತು. ಯಾರಿಗೆ? ಯಾರ ವಿಳಾಸಕ್ಕೆ ಬರೆಯುವುದು? ಇಲ್ಲಿಂದ ಒಂದುವೇಳೆ ಕನ್ನಡದಲ್ಲಿ ಬರೆದರೆ ಅಲ್ಲಿ ಟಪಾಲಿನವರಿಗೆ ಹೇಗೆ ಗೊತ್ತಾಗುವುದು? ಇಂಗ್ಲೀಷಿನಲ್ಲಿ ಬರೆದರೆ, ಆ ಭಾಷೆ ಅಲ್ಲಿ ಚಲಾವಣೆಯಲ್ಲಿ ಇಲ್ಲದೇಹೋದರೆ? ಹೀಗೂ ವಾದಿಸಿತು ಜನ.

ಅಂತೂ ಪತ್ರ ಹೋಗಲಿಲ್ಲ.

ನಮ್ಮೂರ ರಸಿಕ ಕೃಷ್ಣಯ್ಯ ಆಗಾಗ್ಗೆ ನೆರೆಯೂರು—ಆಚೆಗಡಿಯ—ಕೆಳಗಿನ ಕೇರೆಗೆ ಹೋಗಿಬರುವುದುಂಟು. ವಾಡಿಕೆಯಾಗಿ ಹೋಗಿ ಆದಿನ ಸಂತೆಯಲ್ಲಿ ಮಾವಿನಹಣ್ಣು ಕೊಳ್ಳುವಾಗ, ಮಾರುವವನ ಮುಖ ನೋಡಿ ಚಕಿತನಾದ; ಮುಖ ಸ್ಪಷ್ಟವಿದೆ. ಆವಮೂ ಕಂಬಳಿಕೊಪ್ಪೆ, ಮಾವಿನ ಬುಟ್ಟಿ, ಮಾಸಿದ ಮೈ, ಮಾಸಿದ ಅಂಗಿ; "ಏನಲೇ ಸಣ್ಣಿ?" ಎಂದ ಕೃಷ್ಣಯ್ಯ; ನಣ್ಣ ತಮ್ಮಣ್ಣಪ್ಪನವರು, ಛಾಯಿ ಸಣ್ಣತಮ್ಮಣ್ಣಪ್ಪನವರು ಎನ್ನಲಿಲ್ಲ.

"ಏನು ಕೃಷ್ಣಯ್ಯ?"

"ಅಯ್ಯೋ ಹುಚ್ಚುಮುಂಡೇದೆ! ನಿನಗೀಗತೀನೆ?"

ಇದು ಈ ಹು........ದು ಅಳತೊಡಗಿತು.

"ವರ್ಸದ ವ್ಯಾಲಾತೇಳ್ರಿ ಈ ಹುಡುಗ ನಮ್ಮ ಹಳ್ಳ್ಯಾಗೆ ನಮ್ಮನ್ಯಾಗೆ ಇರಾಕಹತ್ತಿ!" ಎಂದು ಜೊತೆಗಿದ್ದ ಮುದುಕ ಹೇಳಿದ.

ಸಣ್ಣ ಊರಿಗೆ ಬಂದಾಗ ಅದೊಂದು ಬಗೆಯ ಸ್ವಾಗತ ನಡೆಯಿತು!

# ಶಂಕರಯ್ಯನ ಸಂಸಾರ

ತಮ್ಮ ಆಫೀಸಿನಲ್ಲಿ ಎಲ್ಲರೂ ಸೇರಿ ಶುಕ್ರವಾರ ಲಕ್ಷ್ಮೀಪೂಜೆ ಮಾಡಬೇಕೆಂದು ಆಚರಣೆಗೆ ತಂದವನು ಶಂಕರಯ್ಯ. ಆ ದಿನ ಲಕ್ಷ್ಮೀಪೂಜೆ, ಪ್ರಸಾದ ವಿನಿಯೋಗ ಇದೆಲ್ಲ ತನ್ನಿಂದಲೇ ಆಗಬೇಕು. ಲಕ್ಷ್ಮಿಯ ಮೇಲೆ ಅಂತಹ ಭಕ್ತಿ. ಬೇಸರಪಟ್ಟ ನಂಜಪ್ಪ, "ಎಂಥ ಮಂಕು ಹೈದರಿವರು !" ಎಂದುಕೊಳ್ಳುತ್ತಾನೆ. "ಆಫೀಸಿನಲ್ಲೂ ಏತಕ್ಕೆ ಈ ಪೂಜಾದಿಗಳು?"

ಶಂಕರಯ್ಯನದೇ ಆದಿನ ತಿಂಡೀ ವ್ಯವಸ್ಥೆಯ ಯಾಜಮಾನ್ಯ. ಸರದಿ ಪ್ರಕಾರ ಗುಮಾಸ್ತೆಯೊಬ್ಬನು ಆ ದಿನ ತಿಂಡಿಯ ಭಾರವನ್ನು ವಹಿಸುವುದು. ಅದರ ವಿನಿಯೋಗ ಶಂಕರಯ್ಯನದು. ಅವನೇ ಹಂಚುವನು. ಮಿಕ್ಕಿದ್ದನ್ನು ಸಂಜೆ ಮಕ್ಕಳಿಗಾಗಿ ಕಟ್ಟಿಕೊಂಡು ಹೋಗುವನು. ಕೆಲವರು—ಶಂಕರಯ್ಯನ ಜನ—ತಮ್ಮ ಮನೆಯಲ್ಲೇ ಮಾಡಿಸಿ ತರುತ್ತಿದ್ದರು. ಅವರಿಗೆ ಹೋಟಲಿಗೆ ಕೊಡಲು ಶಕ್ತಿ ಇಲ್ಲ. ನಂಜಪ್ಪ, "ನಾನು ನನ್ನ ಸರದಿ ಬಂದಾಗ ಏನು ತರಿಸುತ್ತೇನೆ ಗೊತ್ತೇ! ರಿನೌನ್ ಹೋಟಲಿಂದ ಪಲಾವ್ ಮಾಡಿಸಿ ತರುತ್ತೇನೆ. ನಿಮಗೆಲ್ಲಾ ಪ್ರಸಾದ ಅಂತ ತಿನ್ನಿಸುತ್ತೇನೆ," ಎಂದು ಹೇಳುತ್ತಿದ್ದ. ಆದರೆ ಅವನ ಸರದಿ ಬಂದಾಗ ಸುಬ್ಬಯ್ಯನ ಹೋಟಲಿಂದಲೇ ಭಾರಿ ತಿಂಡಿಯನ್ನೆ ತರಿಸುತ್ತಿದ್ದ.

ನಂಜಪ್ಪ ಸರಸಿ ಮತ್ತು ವಿನೋದವಾಗಿ ಮಾತನಾಡುವವನು.

ಒಂದೊಂದು ವೇಳೆ ಟೀಕೆ ಮಾಡಿದರೂ ಅದನ್ನು ಇವರು ಮನಸ್ಸಿಗೆ ಹಚ್ಚಿ ಕೊಳ್ಳುವಂತಿರಲಿಲ್ಲ. ಆಗ, 'ಇರುವ ವಿಚಾರ ಹೇಳುತ್ತೇನೆ ಅಲ್ಲವೆ?' ಎನ್ನು ವನು.

ಶಂಕರಯ್ಯ ಹೋಟಲಿನಲ್ಲಿ ತಿಂಡಿ ತಿನ್ನುತ್ತಿದ್ದರೂ ಅವನು ಒಳ್ಳೆ ಆಚಾ ರವಂತ. ಪ್ರಮುಖವಾಗಿ ವಿಭೂತಿ ಗಂಧ ಹಚ್ಚಿಕೊಳ್ಳುತ್ತಿದ್ದ. ತಿಥಿ ವಾರ ನೋಡದೆ ಹಜಾಮತಿಯಾಗದು. ಆಚಾರ—ಧರ್ಮನಿಷ್ಠೆಯ ವಿಷಯ ಬಂದಾಗ— "ಆಚಾರ, ಅನುಷ್ಠಾನಾದಿಗಳು ನಿತ್ಯಕರ್ಮ. ಅವು ಆಗಲೇ ಬೇಕು. ಆದರೆ ಅವುಗಳಿಂದ ಫಲಾಪೇಕ್ಷೆ ಮಾಡಕೂಡದು. ಹೇಗೆಂದರೆ, ದಿನ ದಿನದ ಊಟಕ್ಕೂ ಮೈ ಪುಷ್ಟಿಯಾಗುವುದಿಲ್ಲ; ಅದೊಂದು ನಿತ್ಯಕರ್ಮ, ಆದರೆ ಒಂದು ದಿನ ಊಟ ಬಿಟ್ಟರೆ ಆಗಲಿ ದೇಹಕ್ಕೆ ಆಯಾಸವೆನಿಸುವುದು; ಇದರಂತೆಯೇ ಪೂಜಾದಿ ನಿತ್ಯಕರ್ಮಗಳು." ಹೀಗೆಲ್ಲ ಹೇಳುವನು. ಆದರೆ ನಂಜಪ್ಪನಿಗೆ ಈ ಮಾತನ್ನು ಕೇಳಿ ನಗು. ಅದೇಕೊ?



ಶಂಕರಯ್ಯನಿಗೆ ಮೂರನೆ ಸಂಬಂಧ. ಉಳಿದ ಎರಡು ಸಂಬಂಧಗ ಳಿಂದಲೂ ಮಕ್ಕಳು. ಮನುಷ್ಯ ತಾಪತ್ರಯದಲ್ಲಿದ್ದಾನೆ, ಎಂದು ಎಲ್ಲರ ಸಹಾನುಭೂತಿ. ಸಾಹೇಬರೊಂದಿಗೆ ಅಚ್ಚುಮೆಚ್ಚು. ಅವರ ಮನೆಗೆ ಹೋಗಿ ಬರುವುದೂ ವಿಶೇಷ. ಅವರೊಂದು ಸಾರಿ ಇವನ ಟೆನ್ನಿಸ್ ಆಟವನ್ನು ಮೆಚ್ಚಿ, ಹೆಚ್ಚಿನ ಸಂಬಳಕ್ಕೆ ಶಿಫಾರಸು ಮಾಡಿದ್ದರು. ಅದು ಅನುಕೂಲವಾ ಗಿಯೇ ಬಂದಿತು ಮೇಲಿನಿಂದ.

ಒಂದು ದಿನ ನಂಜಪ್ಪ, ಶಂಕರಯ್ಯ ಯಾರೋ ಹೆಂಗಸರನ್ನು ಕರೆದು ಕೊಂಡು ಹೋಗುತ್ತಿದ್ದುದನ್ನು ನೋಡಿದ. ಆಫೀಸಿಗೆ ಬಂದಮೇಲೆ "ಏನ್ರೀ, ಸಾಹೇಬ್ರೂ, ಸಾಹೇಬ್ರ ಮನೆಯವರು ಕೂಡ ನಿಮ್ಮ ಮೇಲೆ ಅಷ್ಟು ವಿಶ್ವಾಸ! ಅಮ್ಮಾವ್ರನ್ನ ಎಲ್ಲಿ ಕರಕೊಂಡು ಹೋಗ್ತಿದ್ರಿ?" ಎಂದು ಕೇಳಿದ.

"ಈ ಅಸಾದವನಿಗೇನು ಮಾಡಬೇಕು?" ಎನ್ನುತ್ತ, "ನಮ್ಮ ಮನೆ

ಹೆಂಗಸರನ್ನ ಕರಕೊಂಡು ಹೋಗ್ತಿದ್ದಿ; ಇನ್ಯಾರೂ ಇಲ್ಲಪ್ಪ" ಎಂದಿದ್ದ ಶಂಕರಯ್ಯ.

ಆದರೆ ನಂಜಪ್ಪನೊಬ್ಬನಿಗೇ ಅಂಥ ಭ್ರಮೆ ಆಗಿರಲಿಲ್ಲ.

ಈತ ಸ್ವಲ್ಪ ಸುತ್ತಾಡಿದವ. ಒಂದು ದಿನ ಶಂಕರಯ್ಯನ ಮನೆಗೆ ಏನೋ ಕೆಲಸಕ್ಕಾಗಿ ಬರಲು ಅವನು ಈಚೆ ಬಂದು ಮಾತನಾಡಿಸಿ, ಹೆಂಡತಿಗೆ "ಕಾಫಿ ಕೊಡು" ಎಂದು ಹೇಳಿದ.

ಹೆಂಡತಿ ಬೆಳ್ಳಿಲೋಟದಲ್ಲಿ ಕಾಫಿ ತಂದು ಇಟ್ಟುಹೋದಳು. ಬಾಯಿ ತೆರೆದ ಒಂದು ಅತ್ತರ್ ಶೀಸೆ ಹತ್ತಿರಬಂದು ಹೋದಂತಾಯಿತು. ನಂಜಪ್ಪ 'ಅಬ್ಬ!' ಎಂದ; ಆ ರೇಶಿಮೆ ಸೀರೆ, ಚಿನ್ನದ ಒಡವೆ, ಪೌಡರಿನ ಮುಖ, ಕಾಫಿ ಇಟ್ಟಿರುವ ಬೆಳ್ಳಿಲೋಟ ಇವನ್ನೆಲ್ಲ ನೋಡಿ.

ನಂಜಪ್ಪ ಲೋಟದ ಕಾಫಿ ಎತ್ತಿ ಕುಡಿದು, "ಶಂಕರಯ್ಯ, ಕಾಫಿ ಕೊಟ್ಟೆ; ನಾನು ಕಚ್ಚಿ ಕುಡಿದು ನಿನ್ನ ಜಾತಿ ಹೋಗಿಸಲಿಲ್ಲ. ಎತ್ತಿ ಕುಡಿದಿದ್ದೇನೆ. ಇನ್ನೂ ಬೇಕಾದ್ರೆ ಹುಳಿಹಾಕಿ ಕೊಡ್ತೇನೆ," ಎಂದ.

ಲೋಟ ಎತ್ತಲು ಬಂದ ಶಂಕರಯ್ಯನ ಹೆಂಡತಿಯ ಬಿಳಿ ಮುಖದಲ್ಲಿ ಈ ಮಾತಿನಿಂದ ಮುತ್ತಿನ ಛಾಯೆಯ ಪಲ್ಲುಗಳು ಕಾಣಿಸಿದವು.

ನಂಜಪ್ಪ ಮಾರನೆಯ ದಿನ ತನ್ನ ಸ್ನೇಹಿತ ದೊಡ್ಡಣ್ಣನ ಜೊತೆಗೆ ಮಾತನಾಡುತ್ತ ಕೇಳುತ್ತಾನೆ— "ಏನಯ್ಯ, ಜನ ಇಂಥಾ ಶೋಕಿ ಮಾಡ್ತಾರಲ್ಲ! ನಾವಿಷ್ಟು ದುಡಿದೂ ನಮಗೆ ಎರಡು ಹೊತ್ತಿನ ಅನ್ನಕ್ಕೆ ಕಷ್ಟ! ಕೆಲವು ಜನಗಳ ಹೆಂಗಸರದೇನು ಠೀವಿ! ರೇಷ್ಮೆ ಸೀರೆ, ಬೆಳ್ಳಿ ಪಾತ್ರೆ ಇದೆಲ್ಲ ಆಶ್ಚರ್ಯ ಅಲ್ಲವೆ?"

"ಅವರ ಮಾವಂದಿರು ಕೊಡ್ತಾರೆ" ಎಂದು ದೊಡ್ಡಣ್ಣನ ಸಬೂಬು.

"ಮಾವಂದಿರಿಗೆ ಯಾರು ಕೊಡ್ತಾರೆ?"

"ಅವರ ಮಾವಂದಿರು."

"ಅವರಿಗೆ?"

ನಂಜಪ್ಪನ ಪ್ರಶ್ನೆಗೆ ಬೇಸತ್ತು, "ನಿನ್ನ ತಲೆಕಾಯಿ! ಅವರನ್ನೇ ಕೇಳು," ಎಂದ ದೊಡ್ಡಣ್ಣ.

 

ಆಫೀಸಿನಲ್ಲೆಲ್ಲ ಗುಲ್ಲು, ಗುಜುಗುಜು; ಯಾರೂ ಹೇಳರು, ಹೇಳದೆ ಇರರು. ಮಾತನಾಡರು, ಮಾತನಾಡದೆ ಇರರು. ಇದರಲ್ಲಿ ಯಾರ ಮೇಲೆ ಬರುವುದೊ? ಯಾರ ತಲೆ ಹೋಗುವುದೊ? ಮೇಲಿನಿಂದ ಏನೋ ಬಂದಿತ್ತಂತೆ. ಸಾಹೇಬರು ಯಾರನ್ನೊ ಕರೆಸಿ, ಏನೋ ಕೇಳಿದರಂತೆ. ಎಲ್ಲರಿಗೂ ಜಾಪಾಳ ಮಾತ್ರೆ ಕೊಟ್ಟಂತಾಗಿದೆ. ಮ್ಯಾನೇಜರ್ ಭೂಮಿಗಿಳಿದು ಹೋಗಿದ್ದಾನೆ. ಏನೇನೋ ಸುದ್ದಿ! ಏನೇನೋ ಮಾತು!

ಒಂದು ದಿನ ಕೋರ್ಟ್‌ನಿಂದ ವಾರೆಂಟ್ ಹುಟ್ಟಿ ಶಂಕರಯ್ಯನ ಅರೆಸ್ಟ್ ಆಯಿತು. ಕೋರ್ಟಿನಲ್ಲಿ ಕೇಸು ನಡೆಯಿತು. ಅನೇಕರು ಸಾಕ್ಷಿ ಹೇಳಿದರು. ಆ ಡಿಟೆಕ್ಟರ್ ತಾನು ಪತ್ತೆ ಮಾಡಿದುದನ್ನು ವಿವರಿಸಿದ. ಸಾಹೇಬನನ್ನು ಕೋರ್ಟಿನಲ್ಲಿ ಪಾಟೀಸವಾಲ್ ಮಾಡಿ ಹರಿದು ಬಿಸಾಡಿಬಿಟ್ಟರು.

ಸರ್ಕಾರಕ್ಕೆ ಮೋಸ ಮಾಡಿ, ಚೆಕ್ಕು ಸೃಷ್ಟಿಸಿ ದುಡ್ಡು ಪಡೆದುದಕ್ಕಾಗಿ, ಶಂಕರಯ್ಯನಿಗೆ ಹದಿನೆಂಟು ತಿಂಗಳು ಕಠಿಣ ಶಿಕ್ಷೆ. ಸಾಹೇಬನಿಗೆ ತನ್ನ ಅಜಾಗರೂಕತೆಗೆ ಡಿಗ್ರೇಡ್ ಆಯಿತು. ಮ್ಯಾನೇಜರ್ ಸರ್ವಿಸ್ ಇದ್ದರೂ ಮನೆಗೆ ಹೋದ. ಶಂಕರಯ್ಯನ ಮನೆ ಜಫ್ತಾಗಿ ಇದ್ದುದೆಲ್ಲ ಬರಬೇಕಾದ ಮೊಬಲಗಿಗೆ ಸಂದಾಯವಾಯಿತು.

ಎರಡು ಮೂರು ತಿಂಗಳಲ್ಲೆ ಇದೆಲ್ಲ ನಡೆದು ಹೋಯಿತು. "ಶಂಕರಯ್ಯ ಅಂಥನಿಷ್ಠ, ದೈವಭಕ್ತ, ಅವನು ಈ ಕೆಲಸ ಮಾಡಿಯಾನೆ?" ಎಂದರು ಕೆಲವರು.... "ದೇವರ ಪೂಜೆಗೂ ಗಂಟು ಹಾಕುವುದಕ್ಕೂ ಏನು ಸಂಬಂಧ!" ಎಂದು ದೊಡ್ಡಣ್ಣ. ನಂಜಪ್ಪ ಮಾತ್ರ, "ಬಲು ತಾಪತ್ರಯಪಟ್ಟುಕೊಂಡಿದ್ದ—ಪಾಪಿ!" ಎಂದ. ಹಾಗೆನ್ನುವಾಗ ಅವನ ಹೆಂಡತಿ, ಅವಳ ಸೊಬಗು ಎಲ್ಲ

ನೆನಪಾಯಿತು ಇವನಿಗೆ. ಆದರೆ, "ಈ ಮೂರ್ಖ ಇಂಥ ಕೆಲಸ ಏಕೆ ಮಾಡಿದ?" ಎಂದು ಆಶ್ಚರ್ಯ.

ಅವನ ಮಕ್ಕಳು ಆಗಾಗ್ಗೆ ಆಫೀಸಿಗೆ ಬರುವುವು. ಇನ್ಶೂರೆನ್ಸ್ ಹಣ ಇತ್ಯಾದಿ ಬಾಕಿ ಬರಬಹುದೇನೊ ಎಂದು ಕೇಳುವುವು. ಆದರೆ ಅದು ಸರ್ಕಾರಕ್ಕೆ ಸೇರಿಹೋಗಿತ್ತು. ಶಂಕರಯ್ಯನ ಮೇಲಿನ ಮರುಕದಿಂದ ಆಫೀಸಿನವರು ಆ ಹುಡುಗರಿಗೆ ಕಾಸು ಕೊಟ್ಟು ಕಳಿಸುವರು. ಅವನ ಹೆಂಡತಿ ಜೀವನ ಹೇಗೆ ಸಾಗಿಸುತ್ತಾಳೆ? ಈ ಸವತಿ ಮಕ್ಕಳನ್ನು ಹೇಗೆ ಪೋಷಿಸುತ್ತಾಳೆ? ಎಂಬುದೇ ಸಮಸ್ಯೆ. ಅವುಗಳ ಪೋಷಣೆ, ಅವರ ಇರವನ್ನು ನೋಡಿದರೆ ತಿಳಿಯುತ್ತಿತ್ತು. ಆದರೆ ಅವಳ ಪೋಷಣೆಯಾದರೂ ಹೇಗೆ? ಯಾರ ಯೋಚನೆಯನ್ನು ಯಾರು ಹಚ್ಚಿಕೊಂಡು ತಲೆ ಕೆಡಿಸಿಕೊಳ್ಳುತ್ತಾರೆ?

ಹುಡುಗರ ಕೈಯಲ್ಲಿ ಒಂದು ಬಾರಿ ಆಕೆ ನಂಜಪ್ಪನಿಗೆ ಹೇಳಿ ಕಳಿಸಿದ್ದಳು. ಇವನು, 'ಇದೆಲ್ಲಿಯ ಪಜೀತಿ!' ಎಂದು ಹೋಗಲೇ ಇಲ್ಲ.

ಶಂಕರಯ್ಯ ಜೈಲಿನಲ್ಲಿ ತಾನೆ ಅಡಿಗೆ ಮಾಡಿಕೊಳ್ಳುತ್ತಿದ್ದಾನಂತೆ. ಇವನ ಹೆಂಡತಿ ಆಗಾಗ್ಗೆ ಬಂದು, ತಿಂಡಿ ಮುಂತಾದ್ದನ್ನು ತಂದುಕೊಟ್ಟು, ಕಣ್ಣೀರು ಕರೆದು ಹೋಗುತ್ತಿದ್ದಳು. ನೋಡಿದವರೆಲ್ಲ—ಎಂಥ ಗರತಿ! ಗಂಡನ ಮೇಲೆ ಎಷ್ಟು ಶ್ರದ್ಧೆ! ಎಂದು ಪ್ರಶಂಸಿಸುತ್ತಾರೆ. ಆಕೆಯನ್ನು ಅವಳ ತಂದೆ ಕರೆದರೂ, ಅವಳು ತೌರೂರಿಗೆ ಹೋಗಲು ನಿರಾಕರಿಸಿ, 'ಗಂಡ ಜೈಲಿನಲ್ಲಿ ಕಲ್ಲು ಒಡೆದು, ರಾಗಿ ಬೀಸುವಾಗ, ನಾನು ತೌರುಮನೆಯ ಅನ್ನ ತಿನ್ನುವುದೇ?' ಎಂದಳಂತೆ. ಇದನ್ನು ಕೇಳಿದ ಜನ, 'ಎಂಥ ನಿಷ್ಠೆ! ಎಂತಹ ಪತಿಭಕ್ತಿ!' ಎಂದು ಮೊದಲಾಗಿ ಸ್ತೋತ್ರಮಾಡಿದರು.

  

ನಂಜಪ್ಪ ಮತ್ತು ದೊಡ್ಡಣ್ಣ ಗೆಳೆಯರಷ್ಟೆ. ದೊಡ್ಡಣ್ಣ ಕಂಟ್ರ್ಯಾಕ್ಟ್ ಮಾಡಿ ಅನುಕೂಲವಾಗಿದ್ದಾನೆ. ನಂಜಪ್ಪ ಬರಿ ಸ್ಟೆನೋಗ್ರಾಫರ್ ಮಾತ್ರ ಆಗಿಬಿಟ್ಟ. ಆದ ಮಾತ್ರಕ್ಕೆ ಸ್ನೇಹ ಹೋಯಿತೆ? ಆಗಾಗ್ಗೆ ಸ್ನೇಹಿತರಿಬ್ಬರೂ ಕೂಡಿ ವಿನೋದವಾಗಿ, ಕಾಲ ಕಳೆಯುವುದುಂಟು.

ನಂಜಪ್ಪ ಮತ್ತು ದೊಡ್ಡಣ್ಣ ಇಬ್ಬರೂ ಒಂದು ಸಂಜೆ ಹೊರಟಿದ್ದಾಗ, ದೊಡ್ಡಣ್ಣ, 'ಇವತ್ತೊಂದು ಹೊಸ ಜಾಗಕ್ಕೆ ನಿನ್ನ ಕರಕೊಂಡು ಹೋಗ್ತೀನಿ' ಎಂದ.

ಆವರೆ ಈತ, ನಂಜಪ್ಪ ಅದನ್ನು ಗಮನಿಸವೆ ಯಾವುದೊ ಬಾಕಿ ವಸೂಲಿಗೊ, ಕ್ರಯಪತ್ರಕ್ಕೆ ಸಾಕ್ಷಿಹಾಕುವುದಕ್ಕೊ ಇನ್ಯಾತಕ್ಕೊ ಎಂದುಕೊಂಡು ಹೊರಟ.

ಗೋಪುರಂ ಎಕ್ಸ್‌ಟೆನ್‌ಷನ್ನಿಂದ ಮಾಯಿನಹಳ್ಳಿಗೆ ತಿರುಗುವ ಚೌಕ. ಅಲ್ಲಿಂದ ಆಚೆ ಒಂದು ದೇವರ ಗುಡಿ. ಅದರ ಪಕ್ಕದಲ್ಲಿ ಹೊಂದಿಕೊಂಡು ಸಣ್ಣ ಮನೆ. ಆ ಮನೆಯಲ್ಲಿ ದೇವಸ್ಥಾನದಲ್ಲಿ ಪೂಜೆಮಾಡುವ ಹುಡುಗ, ಆತನ ಒಡಹುಟ್ಟಿದವರು ಮತ್ತು ತಾಯಿ ಇದ್ದಾರೆ ಎಂಬ ವರದಿ. ಒಳಗಡೆ ಕೋಣೆಗೆ ಬಟ್ಟೆಗಳನ್ನು ಇಳಿಯಬಿಟ್ಟು ಎರಡುಭಾಗ ಮಾಡಿದಂತಿದೆ.

ತೆರೆದ ಬಾಗಿಲು—ದೀಪ ಹಚ್ಚಿದೆ.

ಇವರು ಒಳಕ್ಕೆ ಹೋದರು.

ನಿರೀಕ್ಷಣೆಯಲ್ಲಿಯೇ ಇದ್ದಂತೆ ತೋರಿದ ಒಬ್ಬ ಹರೆಯದ ಹೆಂಗಸು ನಗುತ್ತ, ಕುಲುಕುತ್ತ ಬಂದು, "ಬನ್ನಿ, ಕೂಡಿ" ಎನ್ನುತ್ತ ಗೋಡೆಯ ಪಕ್ಕದಲ್ಲಿ ರಸ್ತೆಗೆ ಕೊಂಚ ಕಾಣುವಂತೆ ಹಾಕಿದ್ದ ಒಂದು ಹಳೆಯ ಸೋಫಾ ತೋರಿಸಲು, ಇವರಿಬ್ಬರೂ ಕುಳಿತರು.

ಆಕೆ ಕೊಂಚ ಬಾಗಿಲನ್ನು ಮರೆಮಾಡಿ ಬಂದಳು. "ಇವರ್‍ಯಾರು ನಿಮ್ಮ ಸ್ನೇಹಿತರು ?"

"ನಮ್ಮ ಸ್ನೇಹಿತರೇ ಸರಿ. ನಿಮಗೂ ಪರಿಚಿತರಾಗಲಿ ಎಂತಲೆ ಕರೆದು ಕೊಂಡು ಬಂದೆ," ಎಂದನು ದೊಡ್ಡಣ್ಣ.

ನಂಜಪ್ಪನಿಗೆ ಕೊಂಚ ಗುರುತು ಹತ್ತಿತು. ಆದರೆ ಸ್ಫುಟವಾಗಲಿಲ್ಲ. ಎಲ್ಲಿಯೋ ನೋಡಿದ್ದ. ಗುಲಾಬಿ ಬಣ್ಣದ ರೇಶಿಮೆ ಸೀರೆ ಉಟ್ಟಿದ್ದಾಳೆ. ಅತಿ ತೆಳುವಾದ ಮಲ್ಲಿನ ರವಿಕೆಯ ಒಳಗಡೆ ಎದೆಗೆ ಕಟ್ಟಿದ ಒಳಕುಪ್ಪಸ, ಬಿಳಿ ಮೈಯ ಕೊಂಚ ಕೊಂಚಭಾಗ ಕಾಣಿಸುತ್ತವೆ. ಹಾಗೆ ಕೊಂಚ ಕೊಂಚವಾ

ಗಿಯೇ ಕಾಣಬೇಕೆಂದು ಅವುಗಳನ್ನು ಹೊಲಿಸಿ ಹಾಕಿಕೊಂಡ ಹಾಗಿದೆ. ಎರಡೆಳೆಯ ಚೈನುಸರ ಬರಿಯ ಕೊರಳಿನಿಂದ ಆ ಎದೆಯ ಮೇಲೆ ಇಳಿಬಿದ್ದಿದೆ. ಮುಖಕ್ಕೆ ಯಥಾಪ್ರಕಾರ ಅಲಂಕಾರ ಸಾಧನ. ಎಲ್ಲಿಯೋ ನೋಡಿದ ಮುಖ—ನಂಜಪ್ಪನಿಗೆ ನೆನಪಾಗಲೊಲ್ಲದು.

"ಇವರು ನಮ್ಮ ಮನೆಗೆ ಹಿಂದೆ ಬಂದಿದ್ದರು; ಬಹಳ ದಿನವಾಯಿತು"—ಏನೋ ನೆನೆಸಿಕೊಂಡು ಉಸಿರು ಕರೆದು, "ಆಮೇಲೆ ಹೇಳಿ ಕಳಿಸಿದರೂ ಬರಲಿಲ್ಲ. ಈಗಲಾದರೂ ಬಂದರಲ್ಲ!" ಎಂದು ಮಾತು ಮುಕ್ತಾಯ ಮಾಡಿದಳು.

"ಈಗ ಬಂದಿರೋದಕ್ಕೂ, ಆಗ ಬಂದಿದ್ದಕ್ಕೂ ಒಂದೇಯೆ?" ಎಂದ ರಸಿಕ ದೊಡ್ಡಣ್ಣ.

"ಬಿಡಿ, ನೀವು ಯಾವಾಗಲೂ ಹೀಗೆ!" ಎಂದು ಇಬ್ಬರ ಮೇಲೂ ನೋಟವೊಂದನ್ನು ಎಸೆದು, "ತಾಂಬೂಲ ತರುತ್ತೇನೆ," ಎಂದು ಬಳುಕುತ್ತ, ಮೈ ಅಲುಗಿಸುತ್ತ, ಇವರ ಮನಸ್ಸನ್ನೂ ಅಲುಗಿಸಿ ಒಳಕ್ಕೆ ಹೋದಳು. ದೊಡ್ಡಣ್ಣ, "ಕೊಂಚ ಹೊತ್ತಿಗೇ ಬರುತ್ತೇನೆ," ಎಂದು ಹೊರಕ್ಕೆ ಹೋದ. "ಏಕೆ ಹೊರಟೆ? ನಾನೂ ಬರುತ್ತೇನೆ," ಎಂದು ನಂಜಪ್ಪ ಹೇಳಿದರೂ ಆತ ಹೋಗಿಯೆ ಬಿಟ್ಟ.

ತಾಂಬೂಲವನ್ನು ಆಕೆ ತರುವ ತನಕ ನಂಜಪ್ಪ ಒಬ್ಬನೆ. ಆಕೆ ಒಳಗಿನಿಂದ ತಾಂಬೂಲದ ತಟ್ಟೆ ತೆಗೆದುಕೊಂಡು ಬಂದಳು. ಉಟ್ಟಸೀರೆ ಆಗಲೆ ಬದಲಾಯಿಸಿ ಒಂದು ತೆಳುವಾದ ಸೀರೆಯುಟ್ಟು, ಬರಿತೋಳು ಕಾಣಿಸುವ ಒಳಕುಪ್ಪಸ ಮಾತ್ರ ತೊಟ್ಟು, ಇಲ್ಲದ ಸಲಿಗೆ ಸ್ನೇಹ ತೋರಿಸುತ್ತ, ಅಕಾರಣವಾಗಿ ನಗುತ್ತ, ನಲಿದಾಡಿಕೊಂಡು ಬಂದಳು.

ನಂಜಪ್ಪ ಆಗಲೆ ನಿಂತಿದ್ದ. ನೋಡಿದಳು. ಅವಳಿಗೆ ತಿಳಿಯಲಿಲ್ಲ. "ಯಾಕೆ, ನಮ್ಮ ಮನೇಲಿ ನಿಮಗೆ ಸಂಕೋಚ?"

ಈತ ಹೇಗೋ ನಕ್ಕ.

"ತಕ್ಕೊಳ್ಳಿ, ತಾಂಬೂಲ ಹಾಕಿಕೊಳ್ಳಿ." ತಟ್ಟೆ ಇಡುವಾಗ ಮೊದಲೆ

ಅಲ್ಲಿ ಮಡಿಸಿ ಇಟ್ಟಿದ್ದ ಕಾಗದ ನೋಡಿದಳು. ಈತ ಹೇಳಬೇಕೆಂದಿದ್ದ ಉತ್ತರವನ್ನು ಅವಳು ನಿರೀಕ್ಷಿಸದೆ, "ಇಷ್ಟು ದಿವಸದ ಮೇಲೆ ಬಂದ್ರಿ !" ಎಂದು ಕೇಳಿದಳು.

"ಶಂಕರಯ್ಯ ಚೆನ್ನಾಗಿದ್ದಾರೊ ?" ನಿಮ್ಮ 'ಯಜಮಾನರು' ಎನ್ನಲಿಲ್ಲ.

"ಬಿಡಿ, ಆ ಮಾತೆಲ್ಲ ಯಾಕೆ ? ತಮಾಷೆಯಾಗಿ, ಸಂತೋಷದಿಂದ ಇರಬೇಕು ಅಂತ ಬಂದಾಗ ?"

"ಶಂಕರಯ್ಯ ಇದ್ದಿದ್ದರೆ ಆತನೊಂದಿಗೆ ತಮಾಷೆಯಾಗಿ ಇರಬಹುದಾಗಿತ್ತು"

"ಸುಮ್ಮನೆ ಹಾಸ್ಯಮಾಡಿ ನನ್ನ ಗೋಳುಹೊಯ್ದುಕೊಳ್ತೀರ," ಎನ್ನುತ್ತಿರುವಾಗ ಸೆರಗು ತಾನೆ ಸರಿಯಿತು ಅವಳ ಮೈ ಚಳಕಕ್ಕೆ.

ಆದರೆ ನಂಜಪ್ಪ ಹಿಂದಕ್ಕೆ ಸರಿದ. ಆಕೆ ಇವನನ್ನೆ ನೋಡಿದಳು· ನೋಡಲಾರದೆ ನೋಡಿದಳು.

"ನಾನಿನ್ನು ಹೊರಡುತ್ತೇನೆ"

"ಆಗಲೇ ಹೊರಟುಬಿಟ್ಟಿರ ? .....ಕಾಫಿ ಮಾಡುತ್ತಿದ್ದೆ ....."

"ಬೇಡ; ಹೋಗಬೇಕು."

"ಇನ್ನು ಯಾವಾಗ ಬರುತ್ತೀರಿ ? ಅಭ್ಯಾಸ ಬಲದಿಂದ ಎಂದಿನಂತೆಯೆ ಇಂದೂ, ಇವನನ್ನೂ ಕೇಳಿದಳು. ನಂಜಪ್ಪ ಮಾತನಾಡದೆ ಹೊರಟ· ಇವನು ಹೊರಡುವಾಗ ಆಕೆಗೆ ಮೊದಲಿನ ಕಳೆ ಇರಲಿಲ್ಲ.

ದೊಡ್ಡಣ್ಣನ ಕಾರು ಹೊರಗಡೆ ಇದ್ದರೂ ಅವನಿಗೆ ಕಾಣಿಸಿಕೊಳ್ಳದೆ ಹೊರಟು ರಾತ್ರಿ ಮನೆ ಸೇರಿದಾಗ ನಂಜಪ್ಪನ ಹೆಂಡತಿ ಗಂಡನನ್ನು ಕೇಳಿದಳು– "ಔಷಧಿ ತಂದಿರಾ ?"

"ನನ್ನಲ್ಲಿ ದುಡ್ಡು ಇರಲಿಲ್ಲ"

"ಬೆಳಗ್ಗೆ ಹೋಗುವಾಗ ಇತ್ತಲ್ಲ ?"

"ಇತ್ತು, ಏನೀಗ ?"

ಬಟ್ಟೆ ಕಳಚಿ, ಹಾಸಿಗೆಯ ಮೇಲೆ ಮಲಗಿದ್ದ ಮೂರು ವರ್ಷದ ಮಗುವನ್ನು ಕಂಡು ಅದರ ಮೇಲೆ ಬಾಗಿ ಅದನ್ನಪ್ಪಿಕೊಂಡು ಮುತ್ತಿಕ್ಕಿದ.

ಆ ಮಗು ತಂದೆಯ ಬರವನ್ನೇ ಕಾದಿತ್ತು.

"ಅಪ್ಪಾ ! ಓಚದಿ ಎಲ್ಲಿ ?"

"ಅದ್ಯಾರಿಗೊ ಬಹಳ ಕಷ್ಟವಾಗಿತ್ತಮ್ಮ; ಅದಕ್ಕಾಗಿ ಅವರಿಗೆ ದುಡ್ಡು ಕೊಟ್ಟೆ. ನಾಳೆ ಖಂಡಿತ ತರುತ್ತೇನೆ."

"ಕಷ್ಟ ಅಂದ್ರೆ ಏನಪ್ಪ ?"

"ಕಷ್ಟ ಅಂದ್ರೆ..........ಕಷ್ಟ ಅಂದ್ರೆ..........ಬಹಳ ತೊಂದರೆ—ಅನಾನುಕೂಲ..........ಹಾಲು ಕುಡಿದೆಯಾ..........ಸುಮ್ಮನೆ ಮಲಗಿಕೊ ಅಪ್ಪ.........."

# ಭದ್ರಶೆಟ್ಟಿಯ ಬದುಕು

ಭದ್ರಶೆಟ್ಟಿ ನಾಲ್ಕಾರು ಜನ ಅಣ್ಣತಮ್ಮಂದಿರೊಡಗೂಡಿ, ಸಂತೆ ಸಾರಿಗೆ ವ್ಯಾಪಾರ ಮಾಡಿ ಹೇಗೆ ಹೇಗೋ ದುಡ್ಡು ದುಡಿಯುತ್ತಿದ್ದ. ಘಟ್ಟದ ಕೆಳಗೆ ಹೋಗಿ, ಹೊನ್ನಾವರ—ಕುಮ್ಮಟ ಇಲ್ಲೆಲ್ಲ ಸಾರಿಗೆ ಮಾಡಿಯೂ ಜೀವನ ಸಾಗಿಸಿದ್ದ. ಬಯಲುಸೀಮೆಗೂ, ಭತ್ತ ಅಕ್ಕಿ ವ್ಯಾಪಾರಕ್ಕಾಗಿ ಗಾಡಿ ಹೊಡೆದುಕೊಂಡು ಹೋಗುತ್ತಿದ್ದುದುಂಟು. ವಾರಕ್ಕೊಂದು ದಿನವೊ ಅಥವ ಎರಡು ದಿನವೊ ಊರಲ್ಲಿದ್ದರೆ ಅದೇ ಹೆಚ್ಚು. ಮಡದಿಯ ಗೀಳು ಹತ್ತಿದರೆ ಹಾಗೆಯೆ. ಮನೆ ಎಲ್ಲಿಯೊ, ಮಲಗುವುದೆಲ್ಲಿಯೊ, ಊಟ ಇನ್ನೆಲ್ಲಿಯೋ, ಹೀಗೆ.

ಈ ಅಣ್ಣತಮ್ಮಂದಿರೆಲ್ಲ ದುಡಿಮೆ ಮಾಡಿದವರೆ. ಅಲ್ಲಲ್ಲಿ ಆಸ್ತಿ ಮಾಡಿಕೊಂಡಿದ್ದರು. ಒಂದು ದಿನ, ಏಕೆ ಬಹಳ ದಿನ ಆಸ್ತಿಗಾಗಿ ಕಿತ್ತಾಟಗಳಾದವು. ಕೊನೆಗೆ ವಿಧಿಯಿಲ್ಲದೆ, ಪಂಚಾಯಿತಿ ನಡೆಯಲೇಬೇಕಾಯಿತು. ಸರಿ, ಒಂದು ದಿನ ಪಾಲಾದರು. ಬೇರೆ ಬೇರೆ ಸಂಸಾರಗಳಾದವು.

ಭದ್ರಸೆಟ್ಟಿ ಕಳ್ಳಗಂಟು ಕೂಡಿಹಾಕಿದ್ದನಂತೆ. ಪಾಲಾದ ಕೂಡಲೆ ಒಂದು ಮನೆ ಬಯಲು ಕೊಂಡ; ಅಲ್ಲಿ ಮನೆ–ಮಂಗಳೂರು ಹೆಂಚಿನ ಮನೆ ಎದ್ದಿತು. ಚಿಕ್ಕಪ್ರಾಯದ ಹುಡುಗಿಯನ್ನು ಮದುವೆ ಮಾಡಿಕೊಂಡು ಮನೆ ತುಂಬಿಸಿದ. ಮನೆಯಲ್ಲಿ ಸಂಸಾರ ನಡೆಯಿತು.

ಜೀವನ ನೊದಲಿನಂತೆಯೆ. ಸಂತೆ–ಅಲೆಯುವುದು; ವ್ಯಾಪಾರ ದೂರದ ಊರುಗಳಲ್ಲಿ. ವಾರಕ್ಕೆ ಒಂದೆರಡು ದಿನವೊ, ಅಥವ ತಿಂಗಳಿಗೆ ಮೂರು ನಾಲ್ಕು ದಿನವೊ ಮನೆಯಲ್ಲಿದ್ದರೆ ಅದೇ ಹೆಚ್ಚು. ಆದರೆ ಮಳೆಗಾಲ ದಲ್ಲಿ ಮಾತ್ರ ಊರು ಬಿಟ್ಟು ಹೋಗಲಾಗುವುದಿಲ್ಲ. ಮಳೆ ಜೀರೆಂದು ಹಿಡಿದು ಇಡೀ ಜಗತ್ತನ್ನೆ ನೆನೆಸಿ ಒದ್ದೆ ಮಾಡಿದಂತಿರುವಾಗ ಯಾವ ವ್ಯಾಪಾರ ನಡೆ ದೀತು!

ಭದ್ರಸೆಟ್ಟಿಗೆ ನೆರೆಯಾತ ಸಿಂಗ. ಆತನಿಗೆ ಕಳ್ಳತನದ ಅಪರಾಧಕ್ಕೆ ಶಿಕ್ಷೆ ಯಾಗಿತ್ತು. ಇಬ್ಬರಿಗೂ ನೆರೆಹೊರೆಯಾದರೂ ಮಾತು ಎಷ್ಟೊ ಅಷ್ಟು. ಆಗಾಗ ಈ ಮನೆಗಳ ಸುತ್ತ ಹಿತ್ತಲಲ್ಲಿ ಹಾಕಿದ್ದ ಇಟ್ಟಿಗೆಯೊ, ಸೌದೆಯೊ, ಇಲ್ಲವೆ ಮನೆ ಹೆಂಚುಗಳೊ, ಅಥವ ಗಳುಗಳೊ ರಾತ್ರಿ ಕಳೆದು ಬೆಳಗಾಗುವುದರೊಳಗೆ ಹೇಗೋ ಬಯಲು. ಸಾಮಾನು ಕಳೆದುಕೊಂಡವರು ಬೈದಾಡಿದರೆ ಭದ್ರ ಶೆಟ್ಟಿ ಹೋಗಿ—"ನೋಡ್ರಿ, ಕಳ್ಳ—ಮಕ್ಕಳು ನಮ್ಮ ಮನಿ ಹುಲ್ಲಿನ ಪಿಂಡೀ ಎಲ್ಲಾ ಕದ್ದಾರೆ," ಎನ್ನುತ್ತಾನೆ. ತನ್ನ ಮನೆ ಸೌತೆಕಾಯಿ ಬಳ್ಳಿಯ ಮಿಡಿ ಗಾಯಿ, ಮನೆಯಮೇಲೆ ಬಿಟ್ಟಿದ್ದ ಕುಂಬಳಕಾಯಿ ಪತ್ತೆಯಿಲ್ಲದುದನ್ನು ತೋರಿ ಸುತ್ತಾನೆ. ವ್ಯಾಪಾರದಲ್ಲಿ ಬಹಳ ಚೌಕಾಸಿ. ಒಂದು ಬಿಲ್ಲಿ (ಮೂರು ಕಾಸು,) ಒಬ್ಬರಿಗೂ ಸೋಲ. ದುಡ್ಡು—ದುಡ್ಡು—ಅದು ಹೇಗೋ ಬರಲೇ ಬೇಕು.

ಆದರೂ ಊರಲ್ಲಿ ತಾನಿದ್ದಾಗ ಸೋಮವಾರ ಬಂದಿತೆಂದರೆ ಮನೆಗೆ ಒಬ್ಬ ಜಂಗಮರು ಮಾಮೂಲಾಗಿ ಬರಲೇಬೇಕು. ಈತ ಅವರನ್ನು ಪೂಜೆ ಮಾಡಿ ತೀರ್ಥ ಪ್ರಸಾದ ತೆಗೆದುಕೊಂಡು, ಅವರಿಗೆ ಭೋಜನ ಮಾಡಿಸಿ, ದಕ್ಷಿಣೆ ಆರು ಕಾಸು ಇತ್ತು ಕಳಿಸಬೇಕು. ಏನೇ ಬರಲಿ ಈ ವ್ರತಕ್ಕೆ ತಪ್ಪ. ಬೆಳಗಿನಲ್ಲಿ ಎದ್ದು ಹೊರಕ್ಕೆ ಬಂದಾಗ ಯಾರಾದರೂ ಜಂಗಮರು ಕಣ್ಣಿಗೆ ಬಿದ್ದರೆ–ಅದು ಬೇಡ—ಒಬ್ಬ ಚಿಕ್ಕ ಜಂಗಮ ಬಾಲಕ ಕಣ್ಣಿಗೆ ಕಾಣಿಸಿದರೆ ಆತನ ಪಾದಗಳಿಗೆರಗಿ ಕಣ್ಣಿಗೊತ್ತಿಕೊಂಡು ಹೋಗಬೇಕು ಈತ. ಆ ದಿನವೆಲ್ಲ ಈತ ಶುಭವೆಂದು ಭಾವಿಸುತ್ತಾನೆ.

ಒಂದು ದಿನ ಇವನ ಹೆಂಡತಿ ಸತ್ತಳು. ಇವನಿಗಾಗ ನಲವತ್ತೈದು ವರ್ಷ ಇವನಿಗೆ ಹೆಣ್ಣು ಇನ್ನಾರು ಕೊಡುತ್ತಾರೆ? ಮಕ್ಕಳಿಲ್ಲ, ನಿಜ. ಅಷ್ಟಕ್ಕೆ ಕೊಟ್ಟಾರೆ?

ತಾನೊಬ್ಬನೆ ಆದರೂ ದುಡಿಯುತ್ತಾನೆ. ಸಾರಿಗೆ ಬಿಟ್ಟಿಲ್ಲ. ಮನೆಯಲ್ಲಿ ತಾಯಿ ಬೇಯಿಸಿ ಹಾಕುವಳು. ಹಬ್ಬದ ದಿನ, ವಿಶೇಷ ದಿನಗಳಲ್ಲಿ ಜಂಗಮ (ಅವನು ಇವನ ಮನೆಗೆ ಖಾಯಂ ಆಸಾಮಿ) ಬಂದೇ ಬರುತ್ತಾನೆ. ಎಂದಿನಂತೆಯೇ ಅವನಿಗೆ ಎರಡು ಬಿಲ್ಲಿ ದಕ್ಷಿಣೆಯೇ ದೊರೆಯುವುದು.

ಊರಲ್ಲಿ ಕಳ್ಳತನಗಳು ಸುಮಾರಾಗಿ ಹೆಚ್ಚಿಕೊಂಡವು. ಕಳ್ಳತನವೆಂದ ಕೂಡಲೆ, ಸಾಧಾರಣವಾಗಿ ಕೆಲಸವಿಲ್ಲದೆ ಅಲೆಯುವವರ ಮೇಲೆ ಆರೋಪಿಸುವುದು ಸಹಜ. ದಸ್ತಗಿರಿ ಮಾಡಿರಬಹುದೆ? ದುರ್ಗ ಅಂಥವನೆ ಇರಬೇಕು. ಹೀಗೆಲ್ಲ ಆಯಾಜನಗಳಮೇಲೆ ಆರೋಪಿಸುವುದಕ್ಕೆ ಆರಂಭವಾಯಿತು.

ಪ್ಯಾಟಿಮಠದ ವೀರಯ್ಯನವರ ಗಾಡಿ—ಹೊಸಗಾಡಿ ಮನೆಯ ಮುಂದೆ ರಾತ್ರಿ ಬಿಟ್ಟು, ಬೆಳಗಿನಲ್ಲಿ ನೋಡಿದಾಗ ಇಲ್ಲ. ಹಿತ್ತಲುಮನಿ ಮೋದೀನ್ ಸಾಬನ ಹೊಸ ಎತ್ತುಗಳು, ಹಾಸನದ ಜಾತ್ರೆಯಲ್ಲಿ ತಂದ ದಿವ್ಯವಾದ ಎತ್ತುಗಳು ಅದೇ ರಾತ್ರೆ ಅದೃಶ್ಯವಾಗಿವೆ. ಅಪ್ರಸಿದ್ಧವಾಗಿ ಇನ್ನೆಷ್ಟು ಕಳ್ಳತನಗಳು ನಡೆದವೊ.

ಪತ್ತೆ ಮಾಡಲು ಬಹಳ ಪ್ರಯತ್ನವಾಯಿತು. ಎಲ್ಲೆಲ್ಲೋ ಸುತ್ತಿ ಅರಸಿದರೂ ಸುಳಿವು ಗೊತ್ತಾಗಲಿಲ್ಲ. ಪೋಲೀಸಿನವರು ಪೇಚಿಗೆ ಬಿದ್ದರು. ಗುಮಾನಿ ಆಸಾಮಿಗಳನ್ನೆಲ್ಲ ಹಿಡಿದು ಹಿಂಸಿಸಿ ಕೇಳಿದರು. ಹಿಂದೆ ಎತ್ತು ಕದ್ದು ಪತ್ತೆಯಾಗಿ ಶಿಕ್ಷೆ ಅನುಭವಿಸಿದ್ದ ನಿಂಗನನ್ನೂ ಚಾವಡಿಗೆ ಕರೆಸಿ ಗಡರು ಹಾಕಿದರು. ಅವನಿಂದ ಏನೂ ಹೊರಡಲಿಲ್ಲ. ಹಿಂದಿನ ಅಪರಾಧದ ಬಗ್ಗೆ ಹೇಳುವಾಗ ತಾನು ನಿರಪರಾಧಿ ಎಂದೂ, ಏನೊ ದೈವ ಮೋಸಮಾಡಿದ್ದರಲ್ಲಿ ತಾನು ಉಳಿದುಕೊಳ್ಳಲಾರದೆ ಹೋದೆನೆಂದೂ ಹೇಳಿದ. ಅದರಲ್ಲಿ ಏನೋ ಸುಳಿವು ಪೋಲೀಸಿನವರಿಗೆ ಗೊತ್ತಾಯಿತೊ, ಇಲ್ಲವೊ, ತಿಳಿಯದು.

ಇಷ್ಟೆಲ್ಲ ಆಗಿ ಒಂದೆರಡು ತಿಂಗಳು ಕಳೆದ ಮೇಲೆ ಒಂದು ದಿನ

ಮೋದೀನ್ ಸಾಬು ಜೆಳಗ್ಗೆ ಎದ್ದು ಕೊಟ್ಟಿಗೆಯಲ್ಲಿ ನೋಡಿದರೆ ಇವನ ಎತ್ತು ಇವೆ! ಇವನಿಗೆ ಪರಮಾಶ್ಚರ್ಯ. ಹೌದೋ? ಅಲ್ಲವೋ? ಪತ್ತಿರ ಹೋಗಿ ಮೈದಡವಿ, ಗುರುತು ನೋಡಿ ಸಂತೋಷಪಟ್ಟುಕೊಂಡ. ಅತಿಶಯ ಸಂತೋಷ ಹೊಂದಿದ.

ನಿಂಗನಿಂದ ಈ ಸಮಯದಲ್ಲಿ ಒಂದು ಅಚಾತುರ್ಯದ ಕೆಲಸ ನಡೆಯಿತು. ಬಂದ ಕುತ್ತು ಅನಾಯಾಸವಾಗಿ ಪರಿಹಾರವಾದ ಸಂತೋಷದಲ್ಲಿ ಹಿಂದು ಮುಂದು ಯೋಚಿಸದೆ, ಆತ ಮೋದೀನ್ ಸಾಬಿಯ ಕೊಟ್ಟಿಗೆಗೆ ಹೋಗಿ ಎತ್ತು ಗಳನ್ನು ನೋಡಿಕೊಂಡು, ಮೋದೀನನ್ನು ಮಾತನಾಡಿಸಿಕೊಂಡು ಬಂದಿದ್ದ.

ಮಾರನೆ ದಿನ ಸಮರಾತ್ರಿ ಮೋದೀನನ ಕೊಟ್ಟಿಗೆಯಲ್ಲಿ ಏನೋ ಶಬ್ದ. ಆತ ಎದ್ದು ನೋಡಿದಾಗ ಕೊಟ್ಟಿಗೆಯಲ್ಲಿ ದಡ! ದಡ! ಶಬ್ದವಾಗುತ್ತಿತ್ತು. ದೀಪ ಹಚ್ಚಿಕೊಂಡು ಬರುವುದರಲ್ಲೆ ಯಾರೊ ಒಬ್ಬ ಕೊಟ್ಟಗೆಯಿಂದ ಹಾರಿ ದೌಡಾಯಿಸಿದ್ದ. ಕಳ್ಳ! ಕಳ್ಳ! ಹಿಡೀರಿ! ಪಕಡೊ! ಪಕಡೊ! ಅನ್ನುವು ದರೊಳಗಾಗಿ ಆತ, ಅಲ್ಲಿ ಹಾರಿ, ಇಲ್ಲಿ ಹಾರಿ ಹೇಗೊ ಮರೆಯಾಗಿಯೆ ಬಿಟ್ಟ. ಮೋದೀನನ ಕೂಗಿಗೆ ಜನ ಬಂದು, ಏನಾಯಿತು? ಕ್ಯಾ ಹೋಗಯಾ? ಕಿದಿರ್ ಹೈ? ಹೀಗೆಲ್ಲ ಕೇಳುತ್ತ ಬಂದು ಮುತ್ತಿಕೊಂಡರು.

ಬೀದಿಯಲ್ಲಿ ಜನ ನಿಂತು ಗಿಜಿಬಿಜಿ ಮಾಡುವಾಗ, ಕೊಟ್ಟಿಗೆಯಲ್ಲಿ ದಡ! ಬಡ! ಶಬ್ದವಾಗಿ ದನಗಳ ಗಂಟಲೊಳಗೆ ಗರ್ರ್! ಎನ್ನಿಸುವ ಶಬ್ದ ಕೇಳಿಸಿತು. ಬಂದು ನೋಡಿದರೆ ಎರಡು ಎತ್ತುಗಳೂ ಬಿದ್ದು ಸತ್ತು ಹೋಗಿವೆ. ಜನಗಳ ಕಳವಳಕ್ಕೆ ಪಾರವಿಲ್ಲದಾಯಿತು. ಮೋದೀನ್ ತಲೆಯ ಮೇಲೆ ಕೈ ಹೊತ್ತು ಕುಳಿತ. ಬೆಳಗಾಯಿತು. ಎಲ್ಲ ತಿಳಿಯಾಗಿ ನಾಲ್ಕು ಜನರ ಯೋಚ ನೆಗೆ ಈ ವಿಚಾರ ಗೊತ್ತಾಗಿ, ವಿಷಹಾಕಿದುದರಿಂದ ಎತ್ತು ಸತ್ತವೆಂದೂ, ರಾತ್ರಿ ಬಂದಿದ್ದವನೆ ವಿಷಹಾಕಿ ಹೋದನೆಂದೂ ನಿಶ್ಚಯವಾಯಿತು. ಅವನೆಂತಹ ಚಾಂಡಾಲನಿರಬೇಕು. ಎತ್ತುಗಳಿಗೆ ವಿಷಹಾಕಿ ಕೊಂದವನು! ಎಂದು ಜನರಾಡಿಕೊಂಡರು.

ಎತ್ತು ಹಿಂದೆ ಕಳುವಾಗಿದ್ದವು. ವಾಪಸ್ ಬಂದುದಕ್ಕೆ ಕಾರಣ, ಕದ್ದ

ವನು ಹೇಗೊ ಪತ್ತೆಯಾದೀತೆಂದು ಭಯಪಟ್ಟು ತಂದುಬಿಟ್ಟನೆಂದೂ, ಅವು ಬದುಕಿದ್ದರೆ ಕಳ್ಳತನ ಬಯಲಾದೀತೆಂದೂ, ಆದ್ದರಿಂದ ಅವು ಸತ್ತು ಹೋದರೆ ಅವುಗಳನ್ನು ಕದ್ದು ತಂದಾಗ ನೋಡಿದ್ದವರು ಅವೇ ಇಲ್ಲದಿದ್ದಾಗ ಗುರುತಿಸ ಲಾರರೆಂದೂ, ಅವುಗಳ ಚರ್ಯೆಯ ಬಗ್ಗೆ ಖಚಿತ ವಿವರ ಕೊಡಲಾರರೆಂದೂ ನಂಬಿ, ಕಳ್ಳ ಆ ರೀತಿ ವಿಷ ಇಟ್ಟು ಎತ್ತುಗಳನ್ನು ಸಾಯಿಸಿರಬೇಕು ಎಂಬುದು ಸಿದ್ಧಾಂತವಾಯಿತು.

ಇಂತಹ ಕೃತ್ಯ ಯಾರು ಮಾಡಿರಬೇಕು ? ಎತ್ತು ನೋಡಲು ಬಂದಿದ್ದ ವರಲ್ಲಿ ಸಿಂಗನೂ ಒಬ್ಬ. ಅವನೆಂದೂ ಮೋದೀನನ ಮನೆಗೆ ಬಾರದವನು ಆಗ ಎರಡು ದಿನಗಳ ಹಿಂದೆ ಎತ್ತು ನೋಡುವ ನೆಪದಲ್ಲಿ ಬಂದಿದ್ದ. ಸರಿ, ಒಂದಕ್ಕೊಂದು ಹೊಂದಿಕೆಯಾಯಿತು. ಸಿಂಗನನ್ನು ಹಿಡಿದು ಸ್ಟೇಷನ್ನಿಗೆ ಕೂಡಿದರು. ಕೇಸು ಹೂಡಿದರು. ಅವನನ್ನು ಬಿಡಿಸಲು ಯಾರೂ ಜಾಮೀ ನಾಗಲಿಲ್ಲ. ಬಸವಣ್ಣಗಳನ್ನು ಕೊಂದ ಪಾಪಿ ! ಚಾಂಡಾಲ !—ಎಂದು ಜನ ಬೈದರು.

ಸಿಂಗ ಪೋಲೀಸು ಠಾಣೆಯಲ್ಲಿ ಬಂದಿಯಾಗಿದ್ದರೂ, ಹೇಗೊ ಏನೊ ಮಾಡಿ ಗಾಡಿ ಕಳೆದುಕೊಂಡ ಮಠದ ವೀರಯ್ಯನಿಗೆ ಹೇಳಿಕಳಿಸಿದ. ವೀರಯ್ಯ ಬಹಳ ಒತ್ತಾಯದ ಮೇಲೆ ಬಂದರೂ ಅವನಿಗೆ ಈತನ ಮೇಲೆ ಬಹಳ ಕೋಪ ವಿತ್ತು. ಹೀನಮಾತುಗಳಿಂದ ಬಯ್ಯುವವನಿಗೆ ಸಿಂಗನದು ಒಂದೇ ಮಾತು. "ಸ್ವಾಮಿ, ನಿಮ್ಮ ಪಾದದಾಣೆಗೂ ನಾನು ಕದ್ದವನಲ್ಲ. ನಾನು ಎತ್ತು ಕೊಂದ ವನೂ ಅಲ್ಲ. ಬೆಂಕಿಯಲ್ಲಿ ನಿಂತು ಪ್ರಮಾಣ ಮಾಡೆಂದರೂ ಮಾಡುತ್ತೇನೆ." ವೀರಯ್ಯನ ಮನಸ್ಸಿಗೂ ಏನೊ ಬೋಧೆಯಾಯಿತು—ಇವನು ನಿರಪರಾಧಿಯಿ ರಬೇಕು. ಸಿಂಗ ತನಗೆ ಬಂದ ಗುಮಾನಿ ಹೇಳಿ, ಅದರ ಸುಳಿವನ್ನು ತಿಳಿಸಿ ದ್ದಕ್ಕೆ ವೀರಯ್ಯ— 'ಇರಲಿ, ದೇವರಿದ್ದಾನೆ,' ಎನ್ನುತ್ತ ಹೋದ.

ವೀರಯ್ಯ ಸಮಾಚಾರ ಸಂಗ್ರಹಿಸಲು ಅಲ್ಲಲ್ಲಿ ಸುತ್ತಿ ತನ್ನ ಗಾಡಿ ಕಳವು ಪತ್ತೆಹಚ್ಚಿದೆ, ಎಂದುಕೊಂಡು ಪೋಲೀಸಿಗೆ ತಿಳಿಸಿದರೂ ಪೋಲೀಸರು "ನಿಮಗೆ

ಲ್ಲಿಯೊ ಹುಚ್ಚು ! ಆ ಮನುಷ್ಯ ಅಂಥವನಲ್ಲ. ಈ ಕೆಲಸ ಈ ಬದ್ಮಾಷ್ ಸಿಂಗನದೇ !" ಎಂದು ದಬಾವಣೆ ಮಾಡಿದರು.

ವೀರಯ್ಯನಿಗೆ ಹಟ ಹುಟ್ಟಿ, ಹೋದುದು ಹೋಗಲಿ, ಒಬ್ಬ ಸಿರವರ್ತಾಧಿಯನ್ನು ಉಳಿಸಬೇಕು, ಎಂಬ ಛಲ ಒಂದಿತು. ಹೇಗೊ ಸಮಾಚಾರಗಳನ್ನು ಹರಿಬಿಟ್ಟ. ಅವು ಎಲ್ಲಿಯೊ ಬಿದ್ದು, ಎಲ್ಲಿಯೊ ಹರಡಿ, ಹೇಗೊ ಬಯಲಿಗೆ ಬಂದವು.

ಜನ ಸಂಬದಾದರು. ಅವನು ಈ ಹೀನ ಕೆಲಸ ಮಾಡಿಯಾನೆ? ಅವನ ಜಾತಿ ಅಂಥಾದ್ದೆ ? ಅವನ ಕಸಬು ಅಂಥಾದ್ದೆ ? ಅವನಿಗೇನು ಕಡಿಮೆ ? ಎತ್ತುಗಾಡಿ ಕದ್ದು ಅವನು ಯಾರಿಗೆ ಕೊಡಬೇಕು? ಜಂಗಮನ ಗಾಡಿ ಕದ್ದು ಕೊಂಡಾನೆ ? ಎತ್ತುಗಳಿಗೆ ವಿಷಹಾಕಿಯಾನೆ ? ಹೇಳುವುದಕ್ಕೂ ತಾರತಮ್ಯ ಬೇಡವೆ? ಅವನ ಬಂಧು ಬಳಗ ಬಹಳವಾಗಿ ಕ್ರೋಧಗೊಂಡು, 'ಯಾವ ನೀಚ ಈ ಮಾತು ಹೇಳೋವನು ? ಗೊತ್ತಾಗಲಿ, ಅವನ ಜೀವ ತೆಗೀತೀವಿ' ಹೀಗೆಲ್ಲ ಮಾತನಾಡಿಕೊಳ್ಳುತ್ತಿದ್ದರು.

ಒಂದು ದಿನ ಭದ್ರಶೆಟ್ಟಿಯನ್ನು ಹಿಡಿಯಲು ವಾರಂಟ್ ಹುಟ್ಟಿತು. ಅಂದಿನಿಂದ ಕಳ್ಳ ಜಾರಿದ. ಎಲ್ಲಿ ಹೋದ ? ಒಬ್ಬರೂ ಹೇಳರು. ಈಗ ಜನ 'ಅವನಿಗೇನು ಬಂದಿತ್ತು ಈ ಕೆಲಸ ಮಾಡಲು !' ಎಂದು ಹೇಳತೊಡಗಿದರು. ಆರು ತಿಂಗಳಾಯಿತು. ಪತ್ತೆಯಾಗಲಿಲ್ಲ. ಸಿಂಗನ ಬಿಡುಗಡೆಯಾಯಿತು.

ಆದರೆ ಈ ಪ್ರಸಂಗದಲ್ಲಿ ಕಳ್ಳನನ್ನು ಪತ್ತೆಮಾಡುವ ಭಾರ ಪೋಲೀಸಿನವರದಾಗದೆ ಮಠದ ವೀರಯ್ಯನದೇ ಆಯಿತು. ಆತ ಜೀವದ ಹಂಗು ತೊರೆದು, ಪಿಸ್ತೂಲೊಂದನ್ನು ಬಾರು ಮಾಡಿಟ್ಟುಕೊಂಡು, ಕಾಡು—ಊರು—ಹಳ್ಳಿ—ಸಂತೆ—ಪೇಟೆ ಎಲ್ಲ ತಿರುಗತೊಡಗಿದ. ತನ್ನ ವ್ಯವಹಾರವನ್ನೂ ಬಿಟ್ಟು ಈ ಕಳ್ಳನನ್ನು ಬಯಲಿಗೆಳೆಯಲೇಬೇಕೆಂಬುದೇ ಅವನ ಗೀಳಾಯಿತು.

ಯಾರೋ ಒಬ್ಬನ ಕೈಯಲ್ಲಿ ಪೋಲೀಸ್ ಅಧಿಕಾರಿಗೆ ಹೇಳಿಸಿದ, 'ಭದ್ರ ಆ ಊರಲ್ಲಿದ್ದಾನೆ, ಎಂಬ ಗುಮಾನಿ ಕೇಳಿದೆ.' 'ಸೈಕಲ್ ಕೊಡುತ್ತೇನೆ; ಹೋಗಿ ಪತ್ತೆಮಾಡಿಕೊಂಡು ಬನ್ನಿ,' ಎನ್ನಬೇಕೆ ಆತ !

ಮತ್ತೆ ನಾಲ್ಕಾರು ತಿಂಗಳು ಕಳೆದವು. ವೀರಯ್ಯ ರೊಚ್ಚು ಹತ್ತಿ, ಈ ಕಳ್ಳನನ್ನು ಹುಡುಕುತ್ತಲೆ ಇದ್ದ. ಒಂದು ದಿನ ಮಳೆಗಾಲದಲ್ಲಿ ಇವರ ಊರಾಚೆ ನಲವತ್ತು ಮೈಲಿದೂರದ ಊರಿನಲ್ಲಿ ಒಬ್ಬ ಕೊಡೆ ಹಿಡಿದುಕೊಂಡು, ಕ್ಷೌರಮಾಡಿಸದೆ ಗಡ್ಡ ಬಿಟ್ಟುಕೊಂಡು, ತಲೆಗೆ ಮುಸುಕು ಹಾಕಿಕೊಂಡು ಬರುತ್ತಿದ್ದುದು ವೀರಯ್ಯನಿಗೆ ಕಾಣಿಸಿತು. ವೀರಯ್ಯ ಆತನನ್ನು ದೂರದಿಂದಲೆ ದಿಟ್ಟಿಸಿ ನಡಿಗೆ, ಎತ್ತರ, ಮೈಕಟ್ಟು ಇವನ್ನೆಲ್ಲ ಗಮನಿಸಿ ಒಂದೇ ಬಾರಿಗೆ ಹಾರಿ ಹೋದ. ಜಂಗಮಯ್ಯನಾದರೂ ಮೈಕಸವು, ಪೆಡಸು ಬಹಳ ಇತ್ತು. "ಲೇ ! ಭದ್ರಾ ! ತೆಗಿಯೋ ಮುಸುಕು ?"

ಅದೇ ಕಣ್ಣುಗಳು ! ಭದ್ರ ಧ್ವನಿ ಕೇಳಿ ತನ್ನ ಹತ್ತಿರ ಓಡಿ ಬರುವವನನ್ನು ಕಂಡು ಕೂಡಲೆ ಓಡಿದ. ವೀರಯ್ಯ ಹಿಂದಿನಿಂದ ಬೆನ್ನಟ್ಟಿದ್ದಾನೆ ಕೂಗಿ ಕೊಂಡು. ಜನ ಒಂದೂ ತಿಳಿಯದೆ ನೋಡುತ್ತಿದ್ದಾರೆ.

"ಕಳ್ಳ ! ಹಿಡೀರಿ ! ಹಿಡೀರಿ !" ಯಾರನ್ನು ಹಿಡಿಯುವುದು ? ಯಾರು ಕಳ್ಳ ? ಯಾವುದೋ ಓಣಿಯಲ್ಲಿ ಭದ್ರ ತಿರುಗಿದ್ದರೂ ಇವನು ಅಟ್ಟಿಸಿಕೊಂಡೇ ಬಂದ. ಇಬ್ಬರೂ ಸಂಧಿಸಿದರು. ಭದ್ರ ಎತ್ತಿ ಒಂದು ಕಲ್ಲು ಇವನ ಮೇಲೆ ಎಸೆಯಬೇಕೆನ್ನುವ ಹೊತ್ತಿಗೆ ವೀರಯ್ಯ ಪಿಸ್ತೂಲು ಹಿಡಿದು 'ಕಲ್ಲು ಕೆಳಗೆ ಹಾಕು. ಹಾಕದಿದ್ದರೆ ಸುಟ್ಟೇನು !' ಎಂದ. ಕಲ್ಲು ಕೆಳಗೆ ಬಿತ್ತು. ವೀರಯ್ಯ ಅವನ ಗಂಟಲು ಹಿಡಿದು ಅದುಮಿಕೊಂಡಿದ್ದಾಗ ಜನ ಬಂದರು. ವೀರಯ್ಯ ಕಳ್ಳನನ್ನು ಹಿಡಿದನಂತೆ—ಎಂದು ಜನಕ್ಕೆ ತಿಳಿಯಿತು.

ಭದ್ರಶೆಟ್ಟಿಯನ್ನು ಹಿಡಿದು ಲಾಕಪ್ಪಿನಲ್ಲಿ ಹಾಕಿ ಅವನ ಮೇಲೆ ಕೇಸು ನಡೆಸಿದರು.

ಕೇಸು ನಡೆಯಿತು. ಮೂರನೆ ದಿನ ತೀರ್ಮಾನವಿತ್ತು. ಬೆಳಿಗ್ಗೆ ಬಂದೀ ಖಾನೆ ಬಾಗಿಲು ತೆಗೆದು ನೋಡಿದಾಗ ಭದ್ರಶೆಟ್ಟಿಯ ದೇಹ, ಉಟ್ಟಪಂಚೆ— ಹರಿದು ಹೊಸೆದು ಹಗ್ಗಮಾಡಿ ಅದರಿಂದ ನೇಣುಹಾಕಿಕೊಂಡ ದೇಹ–ಜಂತೆಗೆ ಜೋತಾಡುತ್ತಿತ್ತು.

ಇವನ ಪರ ಕಟ್ಟೆ ಹಿಂದೆ ವಾದಿಸಿದ್ದ ಇವನ ಬಂಧು ಬಳಗ ಇವನ ದೇಹಕ್ಕೆ ಅಂತ್ಯಕ್ರಿಯೆ ನಡೆಸಲಿಲ್ಲ ಕೂಡ. ಆಸ್ಪತ್ರೆಯವರು ದೇಹ ಕೊಯ್ದು ತಮ್ಮ ಪರೀಕ್ಷೆ ಮುಗಿಸಿದ ಮೇಲೆ ಅದನ್ನೊಂದು ಗುಂಡಿಯಲ್ಲಿ ಮುಚ್ಚಿಸಿದರು. ಆಸ್ಪತ್ರೆಯವರು ಮುಟ್ಟಿದ್ದ ದೇಹವನ್ನು ಮುಟ್ಟಿದರೇ ಮೈಲಿಗೆ ಎಂದರು ಅವನ ಬಂಧುಗಳು.

ಭದ್ರ ಕಳ್ಳತನದ ದುಡಿಮೆ ನಡೆಸಿದ್ದಾಗ?

# ವೈದ್ಯ ಮತ್ತು ಅವನ ರೋಗಿ

ಕರಿಯಪ್ಪಗೌಡ—ಡಾಕ್ಟರ್ ಕರಿಯಪ್ಪಗೌಡ ಬಡತನದಲ್ಲಿ ಬೆಳೆದ. ತಾಯಿ ಮುದುಕಿ, ಗಂಡನನ್ನು ಕಳೆದುಕೊಂಡ ಅನಾಥೆ. ಹೇಗೋ ಹುಡುಗ ಓದಿದ; ಡಾಕ್ಟರ್ ಆದ. ಸ್ವಂತವಾಗಿ ಗಳಿಸಿ ಶ್ರೀಮಂತನಾಗುತ್ತೇನೆ, ಎಂದು ಔಷಧ ಮತ್ತು ವೈದ್ಯಶಾಲೆಯೊಂದನ್ನು ತೆರೆದ.

ಮುಖ ಮಾಟವಾಗಿದೆ; ಬಣ್ಣ ಕಪ್ಪು. ತಾಯಿ ತಂದೆ ಏಕೆ ಕರಿಯಪ್ಪನೆಂದು ಕರೆದರೊ? ಚಿಕ್ಕವನಾಗಿದ್ದಾಗ ಇವನ ಜೊತೆಯವರು ಆ ಬಣ್ಣವನ್ನು ನೋಡಿ, "ಬಣ್ಣಕ್ಕೆ ತಕ್ಕ ಹೆಸರು; ಹೆಸರಿಗೆ ತಕ್ಕ ಬಣ್ಣ," ಎನ್ನುತ್ತಿದ್ದರು. ಬಡವನಾಗಿ, ಅನಾಥೆಯ ಮಗನಾಗಿ ಮತ್ತೆ ಜೊತೆಯವರ ಕುಚೋದ್ಯಕ್ಕೆ ಎಳೆತನದಲ್ಲೆ ಪಕ್ಕಾಗುವುದು ಒಂದು ದೌರ್ಭಾಗ್ಯ. ಮಗನನ್ನು ಅರಿತ ಹೃದಯದ ತಾಯಿ ಸಂತವಿಸುವಳು, 'ಮಗನೆ, ನಾನು ಕಪ್ಪು; ಆದರಂತೆ ನೀನು,' ಎನ್ನುವಳು.

ತಾಯಿಯನ್ನು "ಅಮ್ಮ, ನನಗೇಕೆ ಹೀಗೆ ಹೆಸರಿಟ್ಟೆ?" ಎಂದು ಕೇಳುವನು; ತಾಯಿಗೆ ಇದಕ್ಕೆ ಸಮಾಧಾನ ಹೇಳಲು ತಿಳಿಯದು.

ಲೋಕದಲ್ಲಿ ಇನ್ನಾರೂ ಬಂಧುವಿಲ್ಲ. ತಾಯೊಬ್ಬಳೆ. ಅವಳ ಮೇಲೆ ಭಕ್ತಿ ಬಲಿಯಿತು. ತಾಯಿಯ ಪ್ರಭಾವ ಇವನ ಮೇಲೆ ಬಹಳ. ಅದೊಂದು ಸತ್ತ್ವಭಾವ.

## ವೈದ್ಯ ಮತ್ತು ಅವನ ರೋಗಿ

ಈಗಿನ ವಿದ್ಯೆಯನ್ನು ಬಡವರು ಸಾಂಗವಾಗಿ ಪೂರೈಸಿದರೆ ಅದೊಂದು ಕೌತುಕ. ಈ ದುಬಾರಿ ವಿದ್ಯೆಯನ್ನು ಎಲ್ಲರೂ ಹೇಗೆ ಪಡೆಯಬಲ್ಲರು? ಈಗ ಕರಿಯಣ್ಣನಿಗೆ ಆಶ್ಚರ್ಯ, ತಾನು ಹೇಗೆ ಓದಿದೆನೊ, ಎಂದು. ತಾನೀಗ ದುಡಿಯುತ್ತಾನೆ; ಔಷಧಿಗಳಲ್ಲಿ ವ್ಯಾಪಾರ ನಡೆಸುತ್ತಾನೆ. ಅನೇಕ ಬಗೆಯ ರೋಗಗಳಿಗೆ ಯಶಸ್ವಿಯಾಗಿ ಚಿಕಿತ್ಸೆ ಮಾಡುತ್ತಾನೆ.

ಆದರೂ ಪ್ರಪಂಚದ ಕಪಟವನ್ನರಿಯ. ದುಡ್ಡು ಕೊಡದೆ ಹೋದವರಿಗೆ, 'ತಾನು ಪರರ ದುಡ್ಡಿನಿಂದ ಓದಿದೆ; ಅದಕ್ಕೆ ಇದು ಸಾಟಿ,' ಎನ್ನುತ್ತಾನೆ. ನಾಲ್ಕಾರು ವಿದ್ಯಾರ್ಥಿನಿವಾಸಗಳಿಗೆ ಇವನು ಸಹಾಯಕ. ಕೆಲವರು ಇವನೊಂದು ಮಂಕು ಎನ್ನುತ್ತಾರೆ ಅವನ ಮುಗ್ಧಸ್ವಭಾವ ನೋಡಿ.

ಹೆಂಡತಿಯ ವಿಚಾರ ಬಂದಾಗ ಇವನಿಗೆ ಇಲ್ಲದ ಸಂದೇಹ ಬರುವುದು. ತಾನು ಕಂದುಬಣ್ಣದವ, ಎಂಬ ದಿಗಿಲು. ಎಂಥ ಬೆಪ್ಪು?—ಎನ್ನಿಸುತ್ತದೆ ನಮಗೆ. ಪ್ರಪಂಚದ ಗಂಡಸರೆಲ್ಲ ಸುರೂಪಿಗಳೆ? ಅದು ತಿಳಿಯಬಾರದೆ? ಹಿಂದೂಸ್ತಾನದ ಜನರೆಲ್ಲ ಕರಿಯರೆ!

ಯೂರೋಪಿನ ಬಿಳಿಯನೊಬ್ಬನೊಂದಿಗೆ ಸಿಲ್ಲಿಸಿದಾಗ ನಮ್ಮಲ್ಲಿನ ಎಂತಹ ಗೌರಾಂಗನೂ ಕಂದುಬಣ್ಣದವನಾಗಿ ಕಾಣುವನು. ಅದಕ್ಕೇಕೆ ಚಿಂತೆ? ಅಂತರಾಳದ ಆಶೆ, ತಾನೊಬ್ಬ ಗೌರಾಂಗಿಯನ್ನು ಮದುವೆಯಾಗಬೇಕೆಂದು. ಇವನ ಮಗನಿಗೆ ತನಗಾಡಿಕೊಂಡಂತೆ ಜನರಾಡಬಾರದು. ಆದರೆ ಹೆಂಡತಿ ಬೆಳ್ಳಗಿದ್ದಮಾತ್ರಕ್ಕೆ ಮಕ್ಕಳ ಬಣ್ಣಕ್ಕೆ ಅದು ಭರವಸೆಯೆ? ತಾನು ವೈದ್ಯನಾಗಿಯೂ ಈರೀತಿ ನಂಬುವುದೆ? ಏನೋ ಛಾನ್ಸ್. ಆಗಬಾರದೇಕೆ?

ಒಂದು ದಿನ ಇಬ್ಬರು ಗಂಡಸರು—ಅವರು ಕರ್ನೂಲು ಜಿಲ್ಲೆಯವರು ರೋಗಿಷ್ಟ ಹೆಂಗಸೊಬ್ಬಳನ್ನು ಚಿಕಿತ್ಸೆಗಾಗಿ ಇವನಲ್ಲಿಗೆ ಕರೆತಂದರು. ಕೆಲವರು ಅವಳಿಗೆ ಮಲೇರಿಯ ಎಂದಿದ್ದರು; ಕೆಲವರು ಹಿಸ್ಟೀರಿಯ ಎಂದರು; ಮತ್ತೆ ಕೆಲವರು ಕ್ಷಯ ಎಂದರು. ಆ ಹೆಂಗಸಿನ ಸ್ಥಿತಿಯನ್ನು ನೋಡಿದರೆ ಮತ್ತೆ ಆ ಕಡೆಗೆ ನೋಡಲು ಮನಸ್ಸಾಗುವುದಿಲ್ಲ.

ಹೆಂಗಸು ಬಿಳಿಚಿಕೊಂಡುಹೋಗಿದ್ದಾಳೆ; ತುಟಿ—ಕೆಳತುಟಿ ಒಡೆದು ರಕ್ತ ಸವರಿದಂತಿದೆ. ಮೇಲ್ತುಟಿ ಸಿಪ್ಪೆ ಎದ್ದಿದೆ. ಕೆನ್ನೆ, ಕಣ್ಣು, ಮೈ ಎಲ್ಲಾ ಒಣಗಿ, ಬತ್ತಿಹೋಗಿವೆ. ಧ್ವನಿಯೇ ಇಲ್ಲ. ಎದೆ ಒಳಕ್ಕೇ ಸೇದಿಕೊಂಡು ಸ್ತ್ರೀತ್ವದ ಗುರುತೇ ಅಳಿಸಿಹೋದಂತಿದೆ. ಎದೆಯ ಗೂಡು, ಪಕ್ಕದ ಎಲುಬುಗಳು, ಕಾಲು, ಕೈಬೆರಳು ಎಲ್ಲ ಕೇವಲ ಎಲುಬಿನ ಅಸ್ತಿಪಂಜರ. ಇಂಥ ಜೀವಕ್ಕೆ ಏನು ಇಲಾಜು? ಮುಖ ನೋಡಿದರೆ ಇದು ಹುಡುಗಿಯೋ ಹೆಂಗಸೋ ಹೇಳುವಂತಿಲ್ಲ. ಅದಕ್ಕೆ ವರ್ಷ ಅವರ ಲೆಕ್ಕದಂತೆ ಹತ್ತೊಂಭತ್ತು. ಇದು ಏನೋ,ರೋಗ! ಎಂದರು ಅವರ ಜನ.

ಡಾಕ್ಟರು ಪರೀಕ್ಷೆ ನಡೆಸಿದ. ಏನೂ ಹೇಳಲಿಲ್ಲ. ಅವಳ ಜನ "ಏನು ಸ್ವಾಮಿ?" ಎಂದರು.

"ಏನೂ ಇಲ್ಲ." ಎಂದ.

"ಇವಳ ಕಾಯಿಲೆ?"

"ಔಷಧ ಕೊಡಿಸಿ."

"ರೋಗ ಗುಣವಾದೀತೆ?"

"ರೋಗ ವಾಸಿಮಾಡುವುದೆ ನಮ್ಮ ಕಸುಬು."

"ಫೀಜು ಏನಾದೀತು?"

"ಇರಲಿ, ನೋಡೋಣ."

"ಏನೋ ಸ್ವಾಮಿ, ತಮ್ಮ ಮಗಳು ಅಂತ ತಿಳಿದು ಆರೋಗ್ಯದಾನ ಮಾಡಬೇಕು"—ಅವರಲ್ಲಿ ವಯಸ್ಸಿನವನು ಹೇಳಿದ

ಡಾಕ್ಟರ್ ಇದಕ್ಕೆ ಮಾತನಾಡಲಿಲ್ಲ.

ಚಿಕಿತ್ಸೆ ಆರಂಭವಾಯಿತು. ಡಾಕ್ಟರನ ಮನಸ್ಸಿನಲ್ಲಿ ಸಂದೇಹ ಭರವಸೆಗಳ ತುಯ್ಯಲಾಟ. ಅದೊಂದು ಯುದ್ಧ. ಕೈಬಿಡುವಂತಿಲ್ಲ. ಆದರೂ ಯಶಸ್ವಿಯಾದೇನೆಂಬ ನಂಬಿಕೆ.

ವೈದ್ಯಶಾಸ್ತ್ರದ ಸಾಧ್ಯವಿದ್ದ ಎಲ್ಲ ಪ್ರಯೋಗಗಳನ್ನೂ ಅಭ್ಯಾಸಮಾಡಿದ ಇವಳಿಗಾಗಿ. ವಿವಿಧಬಗೆಯ ಚಿಕಿತ್ಸಾ ವಿಧಾನಗಳು, ಪ್ರಕೃತಿ ವಿಧಾನಗಳು,

ಆಹಾರ ವಿಧಾನಗಳು ಇವನ್ನೆಲ್ಲ ನೋಡಿಕೊಂಡ. ಅಂತೂ ಮನಸ್ಸಿಗೆ ನಿರ್ಣಯ ಆದ ಮೇಲೆ ಪ್ರಯೋಗಕ್ಕೆ ತೊಡಗಿದನು. ಹಿಂದೆ ಅಲೆಕ್ಸಾಂಡರ್ ವಿಜಯ ಯಾತ್ರೆ ನಡೆಸುವಾಗ, ಗಾರ್ಡಿಯನ್ ನಾಟ್ಸ್ ಎಂಬ ಗಂಟನ್ನು ಬಿಚ್ಚಿದವನು ಜಗದ್ವಿಜಯಿಯಾಗುತ್ತಾನೆ, ಎಂಬ ಪ್ರತೀತಿ ಕೇಳಿ ಅದನ್ನು ಕತ್ತಿಯಿಂದ ಕತ್ತ ರಿಸಿ, ಬಿಚ್ಚಿದೆನೆಂಬ ಖ್ಯಾತಿಗೆ ಗುರಿಯಾದನು. ಅದು ಅವನಿಗೆ ಸರಿಹೋಯಿತು. ಈ ರೋಗ ಒಂದು ಕಗ್ಗಂಟು ; ಅಲ್ಲ ನೂರು ಕಗ್ಗಂಟುಗಳು. ಒಂದೊಂದನ್ನೂ ಬಿಚ್ಚಬೇಕು. ತಾಳ್ಮೆ, ವಿವೇಕ, ಅನುಭವ ಮತ್ತು ಪ್ರಯೋಗ ಎಲ್ಲವೂ ತೀವ್ರ ಪರೀಕ್ಷೆಗೆ ಗುರಿಯಾಗಬೇಕಾಯಿತು.

ದೇಶೀಯ ವೈದ್ಯವಿಧಾನಗಳನ್ನೂ ಉಪೇಕ್ಷೆಮಾಡಲಿಲ್ಲ ಕರಿಯಪ್ಪ. ಜಲ ಚಿಕಿತ್ಸೆ, ಮೃಣ್ಮಯಸ್ನಾನ, ಸೂರ್ಯರಶ್ಮಿ ಅಂಗಾಂಗಗಳನ್ನು ಸೇವುವುದು ಎಲ್ಲ ಮಾಡತೊಡಗಿದನು.

ನಾವು ಉಳಿವುಗಳ ನಡುವಿನ ಹೋರಾಟದಂತಿತ್ತು. ಅಪಾಯದ ಗಡಿ ಯನ್ನು ದಾಟಿದ ನಂತರ ದೀರ್ಘ ಉಸಿರೆಳೆದ.

ಮಣ್ಣಿನಲ್ಲಿ ಬೊಂಬೆ ಮಾಡುವವನು ಅಲ್ಲಲ್ಲಿ ಮಣ್ಣು ಮೆತ್ತುತ್ತಾನೆ. ರೂಪರೇಷೆಗಳನ್ನು ತಿದ್ದುತ್ತಾನೆ ; ಆಕಾರಗಳನ್ನು ನಿರ್ಮಿಸುತ್ತಾನೆ. ಇವು ಎಲುಬು ಚಕ್ಕಳದ ವಿಕೃತವಾದ ಕುಟುಕು ಜೀವದ ವಸ್ತು. ಅವರಲ್ಲಿ ಉಸಿರು ತುಂಬಿ, ಮಾಂಸ ಮಜ್ಜಗಳನ್ನು ತುಂಬಿ, ಆಕಾರ ತರುವುದು ಒಂದು ಪರಮ ಸಾಧನೆ !

ಇವನಿಗೆ ಇದೊಂದು, ತನ್ನ ಉದ್ಯೋಗದಲ್ಲಿ ಬಂದೊದಗಿದ ಪರೀಕ್ಷಾ ಕಾಲ–ಸತ್ವಪರೀಕ್ಷಾಕಾಲ ಎಂದಂತಾಯಿತು. ಇದೇ ಯೋಚನೆ-ಇದೇ ಚಿಂತನ, ಇದರ ಪರಿಣಾಮವೇ ಆದ್ಯಕಾರ್ಯ.

ಏನೋ ಮನಸ್ಸಿನಲ್ಲಿ ಭರವಸೆಯುದಯಿಸುವುದು. ಅತ್ಯಂತ ದಯಾರ್ದ್ರ ದೃಷ್ಟಿಯಿಂದ ಆ ಜೀವಚ್ಛವವನ್ನು ನೋಡುವನು. ಅವಳ ಮುಖದಲ್ಲಿ ಕಿಂಚಿತ್ ನಗುವಿನ ಛಾಯೆ ಕಂಡಾಗಲೂ ಇವನ ಮನಸ್ಸಿನ ಭರವಸೆ ಅಪಾರ ವಾಗಿ ಬೆಳೆಯುವುದು. ಮನಸ್ಸಿನಲ್ಲಿ ಏನೋ ಬಲಿಯತೊಡಗಿತು. ತಾನೀ

ಕುಟುಕು ಜೀವದ ಜೀವಿಗೆ ಪ್ರಾಣಕೊಡುವುದಲ್ಲದೆ ಆರೋಗ್ಯವನ್ನೂ ಕೊಡಬಲ್ಲೆನಲ್ಲವೆ? ಇದನ್ನೊಂದು ಜೀವಿಯನ್ನಾಗಿ ಪ್ರತಿಸೃಷ್ಟಿ ಮಾಡಬಲ್ಲೆನಲ್ಲವೆ? ರೋಗಿ ಮತ್ತು ಚಿಕಿತ್ಸಕರ ಮಮತೆ ಅತ್ಯಂತ ಆಂತರಿಕವಾಗಿ ಬೆಳೆಯಬಹುದು. ವೈದ್ಯ ಅನೇಕ ವೇಳೆ ತನ್ನ ಪರಕ್ಕೆ ಪೋಷಕೆಯಾಗಲು ಬಂದ ಜೀವಿಗಳ ಮೇಲೆ ಮರುಕ ಪ್ರೇಮಗಳನ್ನು ತೋರಿಸುವುದೂ ಜಗತ್ತಿನಲ್ಲಿ ನಡೆದಿದೆ.

ಒಂದು ದಿನ ಕರಿಯಪ್ಪಗೌಡನಿಗೆ ಮನಸ್ಸಿನಲ್ಲಿ ಏನೋ ಸ್ಫುರಿಸಿದಂತಾಯಿತು ತನ್ನ ಅಂತರಂಗವನ್ನು ತಾನು ಅರಿತುಕೊಂಡಂತೆ ಭಾಸವಾಗಿ ಆಶ್ಚರ್ಯವೆನಿಸಿತು–ಸ್ಫೂರ್ತಿಯುಳ್ಳವನಿಗೆ ಥಟ್ಟನೆ ಒಂದು ದಿನ ತನ್ನ ಪ್ರತಿಭೆಯ ಪ್ರಭೆ ಮಿಂಚಿದಂತೆ.

ಆಹಾರ, ಔಷಧ, ಚಿಕಿತ್ಸೆ, ವಿಶ್ರಾಂತಿ ಮತ್ತು ಇವುಗಳನ್ನು ಒಳಗೊಂಡ ಇವನ ಔದಾರ್ಯಮಯವಾದ ಉಪಚಾರ ಇವೆಲ್ಲದರಿಂದ ರೋಗಿಯ ರೋಗ ಹರಿಯುಬಂತು; ಚೇತನ ಬರತೊಡಗಿತು. ತೂಕ, ಮಾಂಸ, ಅಂಗಾಂಗಗಳ ಬೆಳವಣಿಗೆ ಎಲ್ಲ ಪುಷ್ಟಸ್ಥಿತಿಗೆ ಮಾರ್ಪಾಡಾಗುತ್ತ ಬಂತು. ಆದರೂ ಇವೆಲ್ಲ ನಿಧಾನಕ್ರಿಯೆ. ದಿನಗಳೆಷ್ಟೊ, ತಿಂಗಳುಗಳೆಷ್ಟೊ ಹೀಗೇ ಉರುಳಿದವು.

ಅಂಗಾಂಗಗಳನ್ನು ವಿದೇಶಿ ಮೀನೆಣ್ಣೆ ಹಚ್ಚಿ ಉಜ್ಜುತ್ತಿದ್ದ–ಕೈ, ಎದೆ, ಕಾಲು, ತೊಡೆ-ಎಲ್ಲ. ಈಗ, ಬತ್ತಿಹೋದ ಗಿಡ ಚಿಗುರತೊಡಗಿದಂತೆ, ಅಲ್ಲೆಲ್ಲ ಬೆಳವಣಿಗೆ ಬಂದಿತು. ಬತ್ತಿಹೋದ ಎದೆಗಳು ಈಗ ಮಾಂಸಲವಾಗಿ, ಗೋಲಾಕಾರವಾಗಿ ರೂಪುಗೊಳ್ಳತೊಡಗಿದವು. ಎಲುಬಿನ ಗೂಡೆನಿಸಿದ್ದ ಮುಖ ತುಂಬಿತು; ಬಣ್ಣಬಂತು. ಸಿಪ್ಪೆಯೊಡೆದು ಒಣಗಿದ ತುಟಿಗಳು ಪೂರ್ಣವಾಗಿ, ನೆನೆದ ಹವಳದ ರಂಗಿಗೇರಿದವು.

ಹಿಂದೆ, ತಲೆಯ ಕೂದಲು ಕೆದರುವಾಗ ಅದನ್ನು ಸರಿಮಾಡದಿದ್ದವಳು ಈಗ ಬಾಚಿ ಎಣ್ಣೆ–ಹೂವಿನಿಂದ ಅಲಂಕರಿಸತೊಡಗಿದಳು. ಡಾಕ್ಟರು ಎದೆಯನ್ನು ಉಜ್ಜುವಾಗ–ತಿಕ್ಕುವಾಗ ಈಗ ಅವಳಿಗೆ ಲಜ್ಜೆಯೆನಿಸುತ್ತದೆ. ಡಾಕ್ಟರು ಕೌತುಕದಿಂದ ಈ ಪರಿವರ್ತನೆಯನ್ನು ನೋಡುತ್ತಾನೆ. ಮನಸ್ಸಿಗೆ ಏನೊಂದೂ ವಿಕಾರವೆನಿಸದೆ ತನ್ನ ರೋಗಿಯ ಎದೆಯಮೇಲೆ ಬೆರಳಾಡಿಸು

ತ್ತಾನೆ. ಒಂದೊಂದು ವೇಳೆ ಅನ್ಯಮನಸ್ಕನಾಗುತ್ತಾನೆ. ಬೆಳೆವ ನಿತಂಬಕ್ಕೆ ಸೂಜಿ ಚುಚ್ಚಿ ಔಷಧವನ್ನು ರಕ್ತದೊಳಗೆ ಸೇರಿಸುವಾಗ ಅವಳು ನಾಚುತ್ತ ಡಾಕ್ಟರನ ಕೈ ಸರಿಸುತ್ತಾಳೆ. ಇದು ರೋಗಿಗಳಿಗೆ ಪ್ರಯೋಗಿಸುವ ಅವನ ದಿನಚರಿ ಕರ್ಮ. ಅವನು ಗದರಿಕೊಂಡು ಔಷಧಿಸೂಜಿ ಚುಚ್ಚಿ ಕೊನೆಯಲ್ಲಿ–"ಪೆದ್ದು ಹುಡುಗಿ, ನನ್ನಲ್ಲಿ ನಿನಗೆ ನಾಚಿಕೆಯೇ ?" ಎನ್ನುತ್ತಾನೆ.

ಅವಳ ಸಮಸ್ತ ದೇಹವೇ ಇವನ ಚಿಕಿತ್ಸಾ ಪ್ರಯೋಗಕ್ಕೆ ಒಳಪಟ್ಟಿದೆ.

ಅವನು ಆದರ್ಶವಾದಿ. ಸ್ತ್ರೀಯನ್ನು ಗೌರವಿಸಿದವನು. ತಾಯಿಯೇ ಇವನು ಮೊದಲು ಕಂಡ ಹೆಂಗಸು. ಸ್ತ್ರೀ ಬಗ್ಗೆ ಗೌರವ; ಸ್ತ್ರೀತ್ವದ ಬಗ್ಗೆ ಗೌರವ. ಲಘುವಾದ ರಾಗ-ಭಾವಗಳಿಗೆ ಮನಸ್ಸು ತುಯ್ಯುಲಾಡುವಂತಹುದಲ್ಲ.

ಈಗವಳು ರೋಗಿಯಲ್ಲ ! ರೋಗವನ್ನು ಹರಿದುಕೊಂಡು ಗುಣಮುಖಳಾಗುತ್ತಿರುವವಳು. ದೇಹದಲ್ಲಿ ಆರೋಗ್ಯ ಹರಿಯುತೊಡಗಿತು; ಆರೋಗ್ಯ ಹರಿದಂತೆಲ್ಲ ಬತ್ತಿದ್ದ ಜೀವ ಬೆಳೆದು ಯೌವನ ಚಲಿಸತೊಡಗಿತು ; ಯೌವನ ಚಲಿಸಿದಂತೆಲ್ಲ ಚೆಲುವು ತುಂಬತೊಡಗಿತು; ಚೆಲುವು ತುಂಬಿದಂತೆಲ್ಲ ವ್ಯಕ್ತವಾಗದಿದ್ದ ಭಾವರಾಗಗಳು, ತೃಪ್ತವಾಗದಿದ್ದ ವಯೋ ಉದ್ವೇಗಗಳು ಜ್ವಲಿಸತೊಡಗಿದವು !

ದಿನ ಕಳೆದವು.

ಈಚೆಗೆ ಡಾಕ್ಟರನ ಸ್ಪರ್ಶಕ್ಕೆ ಅವಳ ಮುಖಕ್ಕೆ ರಕ್ತವೇರುವುದು ಕಾಣುತ್ತದೆ. ತುಂಬಿದೆದೆಯಿಂದ ವೈದ್ಯನು ತನ್ನ ರೋಗಿಯ ಕೂದಲನ್ನು ಬೆರಳಲ್ಲಿ ಸುತ್ತುತ್ತ ಅವಳನ್ನು ನೋಡತೊಡಗುವನು. ತಾನು ಸೃಷ್ಟಿಸಿದ ಜೀವವಿದು ! ಎಂದು ಮನಸ್ಸಿನಲ್ಲಿ ಅಭಿಮಾನವೇಳುವುದು. ಇದು ತನ್ನದೇ ? ಎಂದು ಒಂದೊಂದುವೇಳೆ ಭ್ರಮೆಯಾಗುವುದು ; ಹಾಗೆಯೆ ರತಿರಾಗ ಬೆಳೆಯುವುದು. ರೋಗ ಕಳೆದ ಆ ತುಟಿಗಳನ್ನು ತನ್ನ ತುಟಿಯಿಂದ ಸೋಂಕುವ ಮನಸ್ಸಾಗುವುದು. ಮೃದುಕೆನ್ನೆಗಳ ಮೇಲೆ ಕೈಯಾಡಿಸುತ್ತ ತನ್ನ ಕೆನ್ನೆಗೆ ಇವು ಹೊಂದಿಕೊಳ್ಳುವುದು ಯಾವಾಗ ? ಎನ್ನುವನು. ಅವಳ ಎದೆಯನ್ನು ಪರೀಕ್ಷಿಸುವಾಗ

ತನ್ನ ಮುಖವನ್ನು ಅಲ್ಲಿ ಹುಡುಗನಲೆ? ಅರಿಯದಿದ್ದ ಸುಖವನ್ನು ಆ ಪ್ರಮತ್ತವಲ್ಲಿ ಕಾಣಲೆ? ಎಂದು ಭ್ರಮಿಷ್ಠನಾಗುವನು.

ಆ ರೂಪ, ಆ ಪೂರ್ಣಗೊಂಡ ರೂಪ, ಆ ಕಳೆ ಕಳೆದ ರೂಪ, ಆ ವಿಕಸಿತವಾದ ಸ್ತ್ರೀತ್ವದ ರೂಪ, ಅನಾಘ್ರಾತಪುಷ್ಪ ಎಂದು ಕವಿ ವರ್ಣಿತವಾದ ಕನ್ಯೆ ರೂಪ–ದೈವಕೃಪೆಯಿಂದ ತಾನು ಸೃಷ್ಟಿಮಾಡಿದೆನೆ? ಅಕಾಮಿತಳಾದ ಈ ಕಾಮಿನಿಯನ್ನು ತಾನು ರೂಪಿಸಿದೆನೆ? ಇವಳು ತನ್ನವಳು! ದೈವದಾಜ್ಞೆಯಿಂದ ತನ್ನವಳು! ಈ ಭಾವ ಬಲಿಯುವುದು. ಮೋಹಿತನಾಗಿ, ಅವಳನ್ನು ತಬ್ಬಿಕೊಳ್ಳಲು ಆಶೆಪಡುವನು.

ಆದರೆ ತನ್ನ ವೃತ್ತಿ, ತನ್ನ ಶೀಲ, ತನ್ನ ಸೇವಾಕ್ಷೇತ್ರ, ತನ್ನ ಆದರ್ಶ ಇವು ದೊಡ್ಡವು. ಒಂದು ವಾಸನೆಗಿಂತ, ಒಂದು ರಾಗಕ್ಕಿಂತ ಇವು ಸ್ಥಾಯಿಯಾದವು. ಇವಳನ್ನು ಪ್ರೀತಿಸುತ್ತೇನೆ; ಇವಳನ್ನು ಮದುವೆಯಾಗುತ್ತೇನೆ ಎಂದು ನಿರ್ಣಯಿಸಿಕೊಂಡನು.

ಅವಳ ಹಿಂದಿನ ಬಿಂಬಚಿತ್ರವನ್ನು ಈಗಿನ ಬಿಂಬಚಿತ್ರವನ್ನು ಎದುರಿಗಿಟ್ಟುಕೊಂಡು ತುಲನೆಮಾಡುವನು. ತಾನಿದೊಂದು ಸಾಧಿಸಿದ ಮಹಾವಿಜಯ ಎಂಬ ಹರ್ಷ. ಈ ಹರ್ಷ ಜೀವನದ ಕೊರತೆಯನ್ನು ಪೂರ್ಣಮಾಡಿದರೆ ಅದೆಂಥ ಸುಖ! ತನ್ನ ಬಯಕೆ ಸಫಲತೆಯನ್ನು ಪಡೆದರೆ, ತಾನಿದು ತನಕ ಒಂಟಿಯಾದುದು ಇಷ್ಟು ಸುಖಮಯವಾಗಿ ಪರ್ಯವಸಾನಗೊಂಡರೆ, ಪ್ರಾಣದಾನ ಮಾಡಿದವನೆಂದು ಅವಳು ಯಾವಜ್ಜೀವವೂ ಕೃತಜ್ಞಳಾಗಿ, ಜೀವನಸಹಚರಿಯೂ ಪ್ರೇಯಸಿಯೂ ಆದರೆ ತನ್ನ ಸುಖಕ್ಕೆ ಪಾರವುಂಟೆ?

ಕವಿಯು ತನ್ನ ಕೃತಿಯನ್ನೇ ಕಂಡು ಅಚ್ಚರಿಪಡುವಂತೆ ಇವಳ ಯೌವನ—ರೂಪ ವಿಕಾಸವನ್ನು ಕಂಡು ಅಚ್ಚರಿಪಡುವನು. ಇವನ ಹಸಿದ ಕಣ್ಣನೋಟದ ಕಾವಿಗೆ ಅವಳ ಮೈಯಲ್ಲಿ ಕಾವೇಳುವುದು; ಮುಖ ಕೆಂಪಾಗುವುದು—ಮಲಗಿದ್ದ ಹಾವನ್ನು ಹೊಡೆದು ಭುಸುಗುಟ್ಟಿಸಲು ಅನುವುಮಾಡಿದಂತಾಗುವುದು. ಆದರೆ ಈ ಮನಃಕ್ರಿಯೆ ವೈದ್ಯನಿಗೆ ತಿಳಿದಿರಲಾರದು!

ಎಷ್ಟೋ ದಿನ ಧೈರ್ಯಮಾಡಿ ಅವಳೆದುರು ತನ್ನ ಪ್ರಣಯರಾಗವನ್ನು

ಹಾಡಬೇಕೆಂದು ಸಂಕಲ್ಪಮಾಡುವನು. ಆದರೆ ಅವಳೆದುರಿನಲ್ಲಿ ಅದು ಕರಗಿ ಹೋಗುವುದು. ಅವಳನ್ನು ಏನೆಂದು ಕೇಳುವುದು?

ಒಂದು ದಿನ ಸಾಹಸಗೊಂಡು, "ನಿನಗೆ ಮದುವೆ ಆಗಿದೆಯೆ?" ಎಂದು ಕೇಳಿದ. ಎದೆ ಎಷ್ಟು ಹೊಡೆದುಕೊಂಡಿತೊ ಆಗ! ಏನೆಂದು ಉತ್ತರ ಬರುವುದೋ? ತನ್ನ ಭವಿಷ್ಯ ಒಂದು ಶಬ್ದವನ್ನು ಅವಲಂಬಿಸಿದೆ, ಎಂಬ ಕಳವಳ, ದುಗುಡ.

ಆಕೆ "ಇಲ್ಲ!" ಎಂದಳು ಮಾತ್ರ. ಇದಿಷ್ಟರಿಂದ ಒಂದು ನಿರ್ಧರ ವಾಯಿತು. ಆದರೆ ಇನ್ನೇನೂ ಹೆಚ್ಚು ವಿಷಯ ತಿಳಿದಂತಾಗಲಿಲ್ಲ.

ಆಕೆಯ ಜೊತೆಗೆ ಬರುತ್ತಿದ್ದ ಒಬ್ಬ ಗಂಡಸು—ಅವನು ಆಕೆಯ ಅಣ್ಣ-ಅವನನ್ನು ಕೇಳಿದನು. "ಈ ವರ್ಷ ಮಾಡುತ್ತೇವೆ; ನೀವು ಆಕೆಯ ಪಡೆದ ತಂದೆ; ಪ್ರಾಣದಾನ ಮಾಡಿದಿರಿ" ಏನೇನೋ ಹರಟಿದ. ಅದಿವನಿಗೆ ಬೇಡ ವಾದ ಮಾತು.

ತಾನು ಡಾಕ್ಟರು; ತಾನು ಅವಳನ್ನು ಉಳಿಸಿದ್ದೇನೆ. ಅವಳ ಮೇಲೆ ತನ್ನ ಹಕ್ಕು. ಅವಳ ಪೋಷಕರು, ತಾನು ಕೇಳಿದರೆ ಅವಳ ಕೈಯನ್ನು ತನ್ನ ಕೈಯೊಂದಿಗೆ ಕೂಡಿಸಲಾರರೆ? ಇದಕ್ಕೇಕೆ ಇಂಥ ಕಳವಳ!

ಹಿಂದೊಬ್ಬ ಗ್ರೀಕರ ಶಿಲ್ಪಿ ಒಂದು ಸ್ತ್ರೀ ಪ್ರತಿಮೆಯನ್ನು ಸೃಷ್ಟಿಸಿದ. ಅದರ ಸೌಂದರ್ಯಕ್ಕೆ ತಾನೆ ಮೋಹಿತನಾಗಿಬಿಟ್ಟ. ಗತಿಕಾಣದೆ ದೇವತೆಗಳನ್ನು ಬೇಡಿದ ಅದಕ್ಕೆ ಪ್ರಾಣದಾನಮಾಡಿರೆಂದು. ಆದರ ಕಥೆ ಮುಂದೆ ಇನ್ನೇನೊ ಇದೆ.

ಈ ಜೀವ ತುಂಬುವ ಶಿಲ್ಪಿ ಅದರಂತೆ ತನ್ನ ಕೃತಿಯಲ್ಲಿ ಮೋಹಗೊಂಡ. ಆದರೆ ಪ್ರಣಯವನ್ನು ಬೇಡಲು ಬಾಯಿಂದ ಬಾರದು. ಕಣ್ಣಿಂದ ನೋಡು ವನು. ಅದನ್ನು ಅವಳು ಅರಿತಿದ್ದಳೊ ಏನೊ? ಪ್ರಚೋದಿತವಾಗದಿದ್ದ ರತಿ ಈಗ ಅವಳಲ್ಲಿ ಮೈಗೂಡಿತ್ತೊ? ಏನೋ?

ಬರಬರುತ್ತ ಇವನನ್ನು ಕಂಡರೆ ಆಕೆ ಲಜ್ಜೆಗೊಳ್ಳುವಳು. ಕರೆದರೆ

ಹತ್ತಿರ ಬಾರಳು. ಮುಟ್ಟಲೀಸಳು. ಇವನು, ಇವನಿಗೆ ತಾನೀಗ ಸ್ತ್ರೀ ಆದೆ ನೆಂಬ ಪೂರ್ಣ ಅರಿವು ಬಂದಿದೆ; ಅದಕ್ಕಿರಬೇಕು, ಎಂದುಕೊಳ್ಳುವನು.

ಆದರೂ ಚಿಕಿತ್ಸೆ ಇನ್ನೂ ನಡೆದಿತ್ತು. ಅವಳು ಪೂರ್ಣ ಆರೋಗ್ಯ ಗಳಿಸಬೇಕು. ಸ್ವಯಂ ಡಾಕ್ಟರನ ಹೆಂಡತಿ, ರೋಗದಿಂದ ದೂರವಿರಬೇಕು. ಅಲ್ಲದೆ ಇವನ ಆಂತರಿಕ ಆಶೆ ಇವಳ ಚಿಕಿತ್ಸಾನೆಪದಲ್ಲಿ ಇನ್ನು ಆದಷ್ಟು ದಿನ ಕಳೆಯಲಿ ಎಂದು.

ಈಗ ಅವಳು ಓಡಾಡಬಲ್ಲಳು. ತನ್ನವರ ಜೊತೆಗೆ ಸಂಚಾರಕ್ಕೆ ಹೋಗುತ್ತಾಳೆ. ಇವನು, ಒಂದು ದಿನ ಅವಳು ಆ ಇನ್ನೊಬ್ಬಾತನೊಂದಿಗೆ ಪಾರ್ಕಿನಲ್ಲಿ ಸುತ್ತುವುದನ್ನು ನೋಡಿ ಹತ್ತಿರ ಹೋದ.

ಇವನನ್ನು ಕಂಡು ಅವಳಿಗೆ ನಾಚಿಕೆಯೆನಿಸಿದರೂ ಏನೋ ಕಳವಳ—ದುಗುಡ. ಮುಖವಮೇಲೆ ಅದು ಕಾಣುತ್ತದೆ. ಅದನ್ನೆಲ್ಲ ಗಮನಿಸದೆ ಡಾಕ್ಟರು ಮಾತಾಡಿಸಿ ಹೊರಟುಬಂದ.

ಈಚೆಗೆ ಅವಳಿಗೊಂದು ಹೊಸ ಬಾಧೆ. ಹೊಟ್ಟೆಯಲ್ಲಿ ಏನೋ ಆಗಿದೆ, ವಾಂತಿ—ವಾಕರಿಕೆ. ಹೊಟ್ಟೆಯೊಳಗೆ ಏನೋ ಗಂಟು ಆಗಿದೆ. ಅನ್ನ ತಿನ್ನ ಲಾಗದು. ಡಾಕ್ಟರು ಬೆದರಿದ. ಎಲ್ಲಾ ರೋಗದ ಗಂಟುಗಳನ್ನು ಬಿಚ್ಚಿದ್ದ. ಇದು ಯಾವ ಹೊಸ ಗಂಟು?

ತನಗೆ ತೋರಿದ ವಿಧಾನದಿಂದೆಲ್ಲ ಪರೀಕ್ಷೆ ನಡೆಸಿದ. ಹೊಳೆಯಲಿಲ್ಲ. ಅಜೀರ್ಣಕ್ಕೆ ಔಷಧಿ ಆಯಿತು; ಹೊಟ್ಟೆ ಸೀಪುವುದು ಆಯಿತು. ಕೊನೆಗೆ ಎಕ್ಸ್‌ರೇ ತೆಗೆಸಲು, ಬಿಳಿ ಮಣ್ಣಿನ ಹಾಲು ಕುಡಿಸಿ ಇಷ್ಟದ ಅವಸ್ಥೆ ಬೀಳಿಸಿ ಫೋಟೋ ತೆಗೆದುದೂ ಆಯಿತು. ಆಗಲೂ ಏನೂ ತಿಳಿಯಲಿಲ್ಲ.

ಒಳಗೆ ಏನೋ ಎದ್ದಿದೆ ಹಿಡಿಗಾತ್ರ. ಹೊಟ್ಟೆಯ ಕ್ಯಾನ್ಸರ್ ಹುಣ್ಣೆ ಇರಬಹುದೆ? ಅದನ್ನು ಆಪರೇಷನ್ ಮೂಲಕ ತೆಗೆದುಹಾಕಬೇಕೆಂದು ಇತರ ಡಾಕ್ಟರರ ಸಲಹೆ.

ಸರಿ, ಆಪರೇಷನ್‌ಗೆ ಸಿದ್ಧಮಾಡಿದುದಾಯಿತು. ಬಡಪ್ರಾಣಿ, ಕಳವಳ ದಿಂದ ಕಾದಿದ್ದಾನೆ. ಇದರಲ್ಲಿ ಏನಾದರೂ ಆಗಿಹೋದರೆ? ಅದೇ ಅವಳಿಗೆ

ವ್ಯತ್ಯಾಸವಾದರೆ? ವೈಸ ಹಾಗೆ ಪೋಸವಾದೀತೆ? ಏನೇನೋ ಭ್ರಮೆಗೊಂಡ ಭೀತಿ.

ಅವಳ ಜನರೂ, ಆ ಇಬ್ಬರು ಗಂಡಸರು ಕಾದಿದ್ದರು. ಇವನಿಗೆ ಆ ಇನ್ನೊಬ್ಬನಾರು ಎಂಬುದು ಗೊತ್ತಿರಲಿಲ್ಲ. ಅವನಾರು ಎಂಬುದನ್ನು ಕೇಳಲೇ ಇಲ್ಲವಲ್ಲ? ಎಂದುಕೊಂಡಿದ್ದ. ಅದು ಏತಕ್ಕೆ ತನಗೆ? ಎಂದು ಸುಮ್ಮನಾದ

ಸ್ತ್ರೀ ಡಾಕ್ಟರು ಹೊರಗೆ ಬಂದು, "ನನಗೇನೋ ಸಂದೇಹ ಬಂದಿದೆ. ಅದನ್ನು ಇನ್ನೂ ಪೂರ್ಣ ಪರೀಕ್ಷೆಮಾಡಿ ಆಮೇಲೆ ಆಪರೇಷನ್ ನಡೆಸಬೇಕೆಂದಿದ್ದೇನೆ. ಅಲ್ಲಿಯವರೆಗೆ ಇಲ್ಲಿಯೇ ವಾರ್ಡಿನಲ್ಲಿ ನಿರೀಕ್ಷಣೆಯಲ್ಲಿಟ್ಟಿರಲಿ. ಆಮೇಲೆ ನೋಡೋಣ," ಎಂದಳು.

ರೋಗಿಯ ಜನರಿಗಿಂತ ಇವನ ಆಸಕ್ತಿಯೇ ಹೆಚ್ಚು. ಎರಡು ಮೂರು ದಿನಗಳಾದಮೇಲೆ ಹೋದ ಆಸ್ಪತ್ರೆಗೆ. ಡಾಕ್ಟರು–ಆಕೆ, ಇವನೊಂದಿಗೆ ಮಾತನಾಡುತ್ತ ರೋಗಿಗೆ ಯಾವ ಯಾವುದಕ್ಕೆ ಚಿಕಿತ್ಸೆ ನಡೆಸಿರುವುದಾಗಿದೆ? ಎಂದು ಇವನನ್ನು ಕೇಳಿದಳು.

ಇವನು ಅವಳ ಮೊದಲಸ್ಥಿತಿ, ತನ್ನ ಚಿಕಿತ್ಸೆ ಎಲ್ಲ ಹೇಳಿದ. ಇಷ್ಟೇ ಅಲ್ಲ. ಉತ್ಸಾಹದಿಂದ ಅವಳ ಆ ಎರಡು, ರೋಗದ ಮತ್ತು ಗುಣಹೊಂದಿದ ಭಾವಚಿತ್ರಗಳನ್ನು ತೋರಿಸಿದ.

ಈ ಕಥೆಯೆಲ್ಲವನ್ನು ಕೇಳಿದ ಆ ವಯಸ್ಕ ಸ್ತ್ರೀ ವೈದ್ಯೆ, "ಇವೆಲ್ಲ ಅದಕ್ಕೆ ಸಂಬಂಧಿಸಿದುದಲ್ಲ. ಅದೇನಿರಬೇಕೆಂಬುದು ನಿಮಗೆ ಹೊಳೆಯಲೇ ಇಲ್ಲ?" ಎಂದು ಕೇಳಿದಳು.

"ಇಲ್ಲ."

"ಈಕೆಗೆ ಮದುವೆಯಾಗಿದೆಯೆ?"

"ಇಲ್ಲ."

ಆ ಸ್ತ್ರೀಡಾಕ್ಟರು ಅವನ ಮುಖವನ್ನು ನಟ್ಟನೋಟದಿಂದ ನೋಡಿದಳು. ಅದರ ಮೂಲಕ ಏನನ್ನೊ ಭೇದಿಸುವಂತೆ ನೋಡಿದಳು.

ಅವನ ಮನಸ್ಸಿನಲ್ಲಿ ಕೊಂಚ ಆತಂಕವಿದ್ದಿತು. ಅವಳ ಮನಸ್ಸಿನಲ್ಲಿ ರುವುದೇನೊ ?–ಎಂದುಕೊಂಡ.

ಡಾಕ್ಟರು ಎದ್ದಳು. ಒಂದೇಮಾತು ಹೇಳಿದಳು: "ಇವಳು ಮೂರು ತಿಂಗಳು ಬಸುರಿ!"

ಈಮಾತು ಇವನಿಗೆ ಸಿಡಿಲು ಹೊಡೆದಂತಾಯಿತು. 'ಹಾ!' ಎಂದ.

ಆಕೆ ಕೇಳಿದಳು, "ನಿಮಗೆ ಗೊತ್ತಾಗಲಿಲ್ಲವೆ? ನಾವು ಆಪರೇಷನ್ ಮಾಡಿದ್ದರೆ ಎಂಥ ಅನರ್ಥವಾಗುತ್ತಿತ್ತು! ಅವಳ ಜನರಿಗೆ ತಿಳಿಸಿ, ಅವಳನ್ನು ಕರೆದುಕೊಂಡು ಹೋಗಲಿ."

ಯಾವುದೋ ಕಳೆದುಳಿದಿದ್ದ ದೇಹಶಕ್ತಿ ಇವನನ್ನು ಹೊರಕ್ಕೆಳೆದು ಕೊಂಡುಬಂದಿತು.

ಬಂದವನು ಹೊರಗೆ ನಿಂತಿದ್ದ ಆಕೆಯ ಅಣ್ಣ, ಮತ್ತೆ ಆ ಇನ್ನೊ ಬ್ಬಾತ, ಅವರಿಗೆ–"ನಿಮ್ಮ ಹುಡುಗಿ ಬಸುರಿಯಂತೆ; ಕರೆದುಕೊಂಡುಹೋಗಿ," ಎಂದ. ಅಷ್ಟು ಹೇಳಿದವನು ಅವರ ಮುಖಭಾವವನ್ನು ಇವನು ಪರೀಕ್ಷಿಸ ಲಿಲ್ಲ. ಲಜ್ಜೆಗೊಂಡ ಅವರೂ ಇವನ ಮುಖ ನೋಡಲು ಮನಸ್ಸು ಮಾಡ ಲಿಲ್ಲ.

# ಮುತ್ತೈದೆ ಪೂಜೆ

ನಾಗೇಶನ ಮನೆಗೆ ಜೀವಣ್ಣರಾಯ ಬಂದ. ಸಾಯಂಕಾಲ. "ಏನ್ರೀ, ಎಲ್ಲೂ ಆಚೆ ಹೋಗಲಿಲ್ಲವೆ? ಇವತ್ತು ಗುಡ್ ಫ್ರೈಡೇ" ಎನ್ನುತ್ತ ಜೀವಣ್ಣ ಬಂದ.

"ಎಲ್ಲಿಗೆ ಹೋಗೋದು, ಈ ಕೊಂಪೇಲಿ? ನೀವೇಕೆ ಎಲ್ಲೂ ಹೋಗ ಲಿಲ್ಲ?"

"ಹೀಗೆ ಹೊರಟಿದ್ದೆ, ನಿಮ್ಮ ಮನೆ ಮುಂದೆ ಹಾದು ಹೋಗೋಣ ಅಂತ. ನೀವೂ ಮನೇಲೆ ಇದೀರಿ. ಬನ್ನಿ, ಸುತ್ತಾಡಿಕೊಂಡು ಬರೋಣ ಕೊಂಚ."

"ಇಲ್ಲ, ಈಗಾಗೋಲ್ಲ. ಮನೆ ಬಿಟ್ಟು ಬರೋಹಾಗಿಲ್ಲ."

"ಏಕೆ?"

"ಮನೆಯವರು ಇಲ್ಲಿಗೆ ಕೊಂಚದೂರ ಇರೊ ಕ್ಯಾತನಹಳ್ಳಿಗೆ ಹೋಗಿ ದ್ದಾರೆ. ಅದ್ಯಾರ ಮನೆಯಲ್ಲೊ ಮುತ್ತೈದೆ ಪೂಜೆಯಂತೆ. ನಾಲ್ಕೈದು ಜನ ಹೆಂಗಸರು ಹೋಗಿದ್ದಾರೆ. ಅದರಲ್ಲಿ ನಮ್ಮ ಮನೆಯವರೂ......"

"ಏನಂದ್ರಿ? ಯಾವುದಕ್ಕೆ?"

"ಮುತ್ತೈದೆ ಪೂಜೆಯಂತೆ."

"ಮುತ್ತೈದೆ ಪೂಜೆ! ಯಾತಕ್ಕೆ ಕಳಿಸಿದ್ರೀ ಅಲ್ಲಿಗೆ? —ಸರ್ವನಾಶ!"

"ಏನ್ರೀ ಅದು? ಏನು ವಿಚಾರ ಮುತ್ತೈದೆ ಪೂಜೆ ಅಂದ್ರೆ! ನನಗೆ

ಗೊತ್ತಿಲ್ಲಪ್ಪ ಅದೆಲ್ಲ. ಸುತ್ತುಮುತ್ತಲಿನ ಮನೆಯವರೂ ಜೊತೆಗೆ ಹೋಗಿದಾರೆ ಅಂದ್ರೆ." ಎಂದು ಕೊಂಚ ದುಗುಡ, ಕೊಂಚ ಸಮಾಧಾನ ಇಟ್ಕೊಂಡು ನಾಗೇಶ ಕೇಳಿದ.

"ಅಯ್ಯೋ! ಕಳಿಸಬಾರದಾಗಿತ್ತು. ನೋಡಿ, ನನ್ನ ಹೆಂಡತಿ ಸಾಯುವುದಕ್ಕೆ ಮೊದಲು ಹೀಗೆ ಮುತ್ತೈದೆ ಪೂಜೆಗೆ ಹೋಗಿಬಂದಳು. ಬಂದವಳು ಎರಡು ದಿನದ ಮೇಲೆ ಬದುಕಲಿಲ್ಲ."

"ಏಕೆ? ಏನಾಗಿತ್ತು?"

"ಏನೂ ಕಾಯಿಲೆ ಇಲ್ಲಾ ಅಂದ್ರೆ!"

"ಮತ್ತೆ ಸತ್ತದ್ದು—ಕಾರಣ?"

"ಅಯ್ಯೋ! ಅದು ದೊಡ್ಡ ಕತೆ. ಇನ್ನೊಂದು ದಿನ ಹೇಳ್ತೀನಿ."

"ಏನ್ರೀ ಜೀವಣ್ಣ, ನನಗೆ ಬಲು ದಿಗಿಲು ಆಗುತ್ತಪ್ಪ. ನೀವು ಹಾಗೆ ಅರ್ಧ ಅರ್ಧ ಹೇಳಿದರೆ. ಅಯ್ಯೊ! ಈ ಹಾಳು ಹೆಂಗಸರಿಗೇನು ಹೊತ್ತು ಬಂತು?"

ನಾಗೇಶ ಸ್ಕೂಲು ಇನ್ಸ್‌ಪೆಕ್ಟರು. ಜೀವಣ್ಣರಾಯ ಪೋಸ್ಟ್‌ಮಾಸ್ಟರು. ಇಬ್ಬರೂ ಈ ಊರಲ್ಲಿ ಸಂಧಿಸಿ, ಪರಿಚಯ ಆದರು. ಚಿಕ್ಕ ಊರುಗಳಲ್ಲಿ ಇನ್ನೇನು? ಕುಳಿತು ಹರಟೆ ಹೊಡೆಯುವುದು, ಸಿಗರೇಟು ಸೇದುವುದು, ಇಸ್ಪೀಟು; ಇಲ್ಲವಾದರೆ ಅಲ್ಲಲ್ಲಿ ಸುತ್ತಾಡಿಕೊಂಡು ಬರುವುದು.

ಸಂಜೆ ಮಬ್ಬು ಕವಿಯಿತು. ಹಳೆಯ ಮನೆ. ಕರೀ ಗೋಡೆಗಳು. ಹೆಂಚಿನ ಸಂದಿನಿಂದ ಹೊಗೆಯ ಬಣ್ಣದ ಇಲ್ಲಣ ಮಾಲೆ ಮಾಲೆಯಾಗಿ, ಹಗ್ಗವಾಗಿ ನೇತಾಡುತ್ತಿದೆ. ಕಣ್ಣಕಪಟಗಳು ತಮ್ಮ ತೊಗಲ ರೆಕ್ಕೆ ಬಡಿದುಕೊಂಡು ಪಟಪಟ ಶಬ್ದಮಾಡಿ ಹಾರುವುದಂತೂ ಅತಿ ಅಸಹ್ಯ. ನಿಶ್ಶಬ್ದ—ಚಿಕ್ಕ ಊರುಗಳ ಸಂಜೆಯ ನಿಶ್ಶಬ್ದ. ಅದು ಮನಸ್ಸಿಗೊಂದು ಭೀತಿಯ ಹೊಸಬರಿಗೆ.

ಜೀವಣ್ಣ ಏನೋ ಹೇಳಿದ. ಅದು ಅಸ್ಪಷ್ಟವೇ ಆದರೂ, ಅದಕ್ಕೂ ಇದಕ್ಕೂ ಸಂಬಂಧ ತೋರದಾದರೂ ಭೀತಿ. ತಾನು ಒಬ್ಬಂಟಿಗ. ಚಿಕ್ಕ

ವಯಸ್ಸಿನ ಹೆಂಡತಿ. ಯಾರ ಗುಣ ಹೇಗೋ? ಏತಕ್ಕೆ ಅವಳು - ಮುಟ್ಟಾಳ ಹೆಂಗಸು—ಹಾಗೆ ಹೋದಳು? ಆದರೆ ಎಲ್ಲಿಗೂ ಹೋಗದೆ ಒಬ್ಬಳೆ ಹೇಗೆ ಕುಳಿತಿರುವುದಕ್ಕಾದೀತು? ಹೆಂಗಸರಿಗೂ ಬೇಜಾರೆನ್ನುವುದು ಇಲ್ಲವೆ? ಅವರಿಗೂ ಸ್ನೇಹಿತರೂ, ಪರಿಚಯ—ವಿಶ್ವಾಸದವರೂ ಬೇಡವೆ?

ಇಷ್ಟೆಲ್ಲ ಸರಿ; ಆದರೆ ಸಂಜೆ ಹೊತ್ತೆ ಏತಕ್ಕೆ ಹೋದಳು? ಅದು ಏನೋ—ಅದು ಆ ಮುತ್ತೈದೆ ಪೂಜೆ?

ಇವನ ಕುತೂಹಲ ಕಡಿಮೆಯಾಗಲಿಲ್ಲ. ಅದೇನು ವಿಷಯ ಕೇಳಿಯೇ ಬಿಡಬೇಕೆಂದು ನಿರ್ಧರಿಸಿ ಕೇಳಿದ.

"ಏನ್ರೀ ಅದು ಜೀವಣ್ಣ? ಏನಾಗಿ ಸತ್ತರು ನಿಮ್ಮ ಹೆಂಡತಿ? ಅದಕ್ಕೂ ಈ ಮುತ್ತೈದೆ ಪೂಜೆಗೂ ಸಂಬಂಧವೆ?"

"ಅಯ್ಯೋ, ಈಗ ಬೇಡಿ ಸಂಜೆ ಹೊತ್ತು. ಅದು ಮನಸ್ಸಿಗೆ ಭಯವಾಗೋದೆ!"

"ಏನು ನಾವು ಹುಡುಗರೆ? ಹೆಂಗಸರೆ? ಭಯ ಯಾಕೆ? ಪರವಾಯಿಲ್ಲ ಹೇಳಿ."

"ನೋಡಿ, ನಾನು ಆಗ ಮುಳವಳ್ಳಿಯಲ್ಲಿದ್ದೆ. ನಮ್ಮ ಮದುವೆ ಆಗಿ ಎರಡುವರ್ಷ ಆಗಿತ್ತು. ಅಲ್ಲೂ ಹೀಗೆ ನಾಲ್ಕಾರು ಜನರ ಪರಿಚಯ. ಹೆಚ್ಚಿನ ಸ್ನೇಹ ಯಾರದೂ ಇಲ್ಲ. ಒಂದು ದಿನ ಯಾರೊ ಹೆಂಗಸು ಮತ್ತು ಒಬ್ಬ ಹುಡುಗ ಬಂದು, ನಮ್ಮ ಹೆಂಗಸರನ್ನು— 'ಮುತ್ತೈದೆ ಪೂಜೆ ನಮ್ಮ ಮನೇಲಿ; ನಾಳೆ ಮಂಗಳವಾರ ತಪ್ಪದೆ ಬರಬೇಕು.' ಅಂತ ಕರೆದು ಅಕ್ಷತೆ ಕಾಳಿಟ್ಟು ಹೋದರು. 'ಹುಡುಗ ಬರ್ತಾನೆ ಕರಕೊಂಡು ಹೋಗೋಕೆ; ನೀವು ಸಿದ್ಧ ಆಗಿರಬೇಕು,' ಎಂದು ತಿಳಿಸಿದರಂತೆ—

ಅವರು ಯಾರು, ಯಾರ ಮನೆಗೆ ಹೋಗಬೇಕು, ಮನೆ ಎಲ್ಲಿ, ಎನ್ನೋದು ಕೂಡ ತಿಳೀದು. ಈಕೆ ತನ್ನ ಪರಿಚಯದವರ ಹತ್ತಿರ ಇದನ್ನು ಹೇಳಿದಳಂತೆ. ಅವರಲ್ಲಿ ಒಬ್ಬಿಬ್ಬರು, 'ಅಯ್ಯೋ, ಅದಕ್ಕೇನು! ಹೋಗಿಬರಲೇ ಬೇಕು. ಯಾರಾದರೇನಂತೆ. ಅದು ಬಹಳ ಒಳ್ಳೆ ಕಾರ್ಯ. ಇದಕ್ಕೆ

ಗುರುತು ಪರಿಚಯವೇ ಬೇಕಾ?' ಹೀಗೆ ಏನೇನೊ ಹೇಳಿ, ಅದಕ್ಕೆ ಹೋಗಬೇಕಾದರೆ ಮಾಡಬೇಕಾದ ನಿಯಮ, ನಿಷ್ಠೆ ತಿಳಿಸಿದರಂತೆ. ಗಂಡನ ಸಂಪರ್ಕ ಇಲ್ಲದೆ ಇದ್ದು, ಆ ದಿನ ಅಭ್ಯಂಜನ ಸ್ನಾನಮಾಡಿ, ಅದೇ ದಿನ ಉಪವಾಸ ವಿದ್ದು, ಮಡಿಉಟ್ಟು ಸಂಜೆ ಅಲ್ಲಿಗೆ ಹೋಗಬೇಕಂತೆ.

ನಮ್ಮ ಮನೆಯವಳು, 'ನಾನು ಒಬ್ಬಳೆ ಹೇಗೆ ಹೋಗಲಿ?' ಎಂದುದಕ್ಕೆ ನೆರೆಮನೆಯಾಕೆ, 'ನನಗೂ ಹೇಳಿದ್ದಾರೆ ನಾನೂ ಬರ್ತೇನೆ' ಎಂದಳಂತೆ.

ಸರಿ, ಮಾರನೇ ದಿನ ಬಂದಿತು. ಆ ಹುಡುಗ ಹೇಳಿದ್ದಂತೆ ಬಂದ. ಬಂದು ಈ ಇಬ್ಬರು ಹೆಂಗಸರನ್ನೂ, ಇನ್ನೂ ಮೂರುಜನ ಹೆಂಗಸರನ್ನೂ ಕೂಡಿ ಕರೆದುಕೊಂಡು ಹೊರಟ.

ಸಂಜೆ ಗೋಧೂಳಿ ಸಮಯ. ಹುಡುಗ ಮುಂದೆ, ಮುಂದೆ—'ಬನ್ನಿ, ಬನ್ನಿ ಜಾಗ್ರತೆ' ಎನ್ನುತ್ತ ಹೋಗುತ್ತಿದ್ದಾನೆ. ಹೆಂಗಸರಿಗೆ ತಮ್ಮ ಮಾತಿನಲ್ಲಿ ತಾವೆಲ್ಲಿಗೆ ಹೋಗುತ್ತಿದ್ದೇವೆ, ಯಾವ ಸ್ಥಳಕ್ಕೆ ಎಂಬುದರ ಗಮನವಿಲ್ಲ. ಯಾವುದೊ ಬೀದಿ ಹಾದು, ಎಲ್ಲಿಯೋ ಹೋಗುತ್ತಿದ್ದಾರೆ. ಕತ್ತಲು ಮುಸಕು ಹಾಕುತ್ತ ಬಂದಿತು. ಆದರೂ ದಾರಿ ಸಾಗಿಲ್ಲ. ಎಲ್ಲಿಯೊ, ಎಲ್ಲಿಯೊ ಹೋದರು. ಯಾವುದೊ ತೋಪಿನಲ್ಲಿ ಹಾದು, ಹೇಗೋ ತಿರುಗಿದಾಗ ಮನೆ ಸಿಕ್ಕಿತು. ಹುಡುಗ ಒಳಕ್ಕೆ ಹೋಗಿ—'ಬನ್ರಿ, ಇವೇ ಮನೆ' ಎಂದನಂತೆ.

ಕಾಲು ತೊಳೆಯಲು ನೀರು ಕೊಟ್ಟ. ಎಲ್ಲರೂ ಹೊರಗೆ ಕಾಲು ತೊಳೆದುಕೊಂಡು ಒಳಕ್ಕೆ ಹೋದರು. ಒಳಗಡೆ ನಡುಮನೆಯಲ್ಲಿ ದೀಪದ ಕಂಭಗಳಲ್ಲಿ ದೀಪ. ಊದುಬತ್ತಿಯ ವಾಸನೆ. ಅದರಾಚೆ ಅಡಿಗೆ ಮನೆಯಿತ್ತೇನೊ. ಒಳಗೆ ಮಾತನಾಡುವ ಶಬ್ದ. ಹೊಗೆ ಮನೆಯೆಲ್ಲಾ ತುಂಬಿತ್ತು. ನಡುಮನೆಯಲ್ಲಿ ಮಣೆ ಹಾಕಿ, ಮಣೆ ಸುತ್ತಲೂ ರಂಗವಲ್ಲಿ ಇಟ್ಟು, ಪೂಜಾಸಾಮಗ್ರಿಗಳು, ಗಂಧ ಕುಂಕುಮ ಅರಿಶಿನ, ಹಸುರು ಕಣ, ಬಳೆ, ವೀಳೆಯದೆಲೆ ಅಡಿಕೆ ಇವೆಲ್ಲ ಇಟ್ಟಿದ್ದರಂತೆ. ಬಯಲಿನಲ್ಲಿದ್ದ ಮನೆ. ಹೊರಗಡೆ ಸುರ್‍ರ್! ಸುರ್‍ರ್! ಎಂದು ಗಾಳಿ ಸುರುಗುಟ್ಟುತ್ತಿತ್ತು. ಗಂಡಸರಾರೂ ಮನೆಯಲ್ಲಿ

ಕಾಣಿಸರು. ದೀಪದ ಪ್ರಕಾಶ ಬಲುಃ ಮಂದ; ಅದರಲ್ಲಿ ಹೊಗೆ ಬೇರೆ ಮನೆ ತುಂಬ ತುಂಬಿದೆ. ಆ ಹೊಗೆಯೊಂದಿಗೆ ಊದುಬತ್ತಿಗಳ ಹೊಗೆ ವಾಸನೆ. ಮನೆ ತುಂಬ ಹೊರಕ್ಕೂ ಒಳಗೂ ಕಪಟಿಗಳು ಪಟಪಟ ಬಡಿದುಕೊಂಡು ಹಾರಾಡುತ್ತವೆ. ಹೊರಗೆ ಜೀರ್! ಜೀರ್! ಎಂಬ ಹುಳು ಶಬ್ದ. ಮೆತ್ತು ಹಾಕಿದ ಮನೆಯಲ್ಲ. ಒಂದೇ ಅಂತಸ್ತಿನ ಎತ್ತರದ ಹೆಂಚಿನ ಮನೆ. ಇಲ್ಲಣ ಮಾಲೆ ಮಾಲೆಯಾಗಿ ಸುತ್ತಿ, ಅಲ್ಲಲ್ಲಿ ಇಳಿಬಿದ್ದು, ಜೋತಾಡುತ್ತ ಹಾರಾಡುವ ಕಪಟಿಗಳ ರೆಕ್ಕೆ ತಗಲುತ್ತ ನೆಲದಮೇಲೆ ಧೂಳು ಉದುರಿಸಿ ಕೊಂಡು ಬೀಳುತ್ತ ಇತ್ತಂತೆ. ಆ ಮನೆಯ ರೂಪ ನೋಡಿದರೆ ಎಂದೂ ಯಾವ ಕಾಲದಲ್ಲೊ ಕಟ್ಟಿ, ಯಾವ ಕಾಲದಲ್ಲೊ ಜನ ವಾಸ ಮಾಡುವುದನ್ನು ಬಿಟ್ಟು, ಅಂದೆ ಆ ಮನೆಯಲ್ಲಿ ಯಾರೊ ವಾಸಕ್ಕೆ ಬಂದಂತೆ ಇತ್ತು. ಧೂಳು ಹತ್ತಿ, ಹೊಗೆಗೆ ಕಂದಿ ಅಲ್ಲಲ್ಲಿ ಮಳೆಗೆ ಸೋರಿ ಕೆಂದುಪಟ್ಟೆ ಬಳಿದಂತೆ ನೀರು ಇಳಿದಲ್ಲಿ ಆಗಿರುವುದು; ಗೋಡೆಗಳಿಗೆ ಬಳಿದ ಸುಣ್ಣ ಬಣ್ಣಗೆಟ್ಟು ಕೊಂಚ ಕೊಂಚವಾಗಿ ಕಾಣಿಸುವುದು ಅವೆಲ್ಲ ಆ ಮನೆಗೆ ಅಂದೇ ಅವರು ವಾಸಕ್ಕೆ ಬಂದಿರಬೇಕು, ಎಂಬುದನ್ನು ನಿರ್ಧರಿಸುವ ಹಾಗಿತ್ತು.

ಹೆಂಗಸರು ಬೆಪ್ಪು ಹಿಡಿದು ಹೆಚ್ಚು ಮಾತನಾಡದೆ ಗಟ್ಟಿಯಾಗಿ ಉಸಿರು ಕೂಡ ಬಿಡದೆ ಇದ್ದರು. ಕೊಂಚ ಹೊತ್ತಿನ ಮೇಲೆ ಒಬ್ಬ ಹೆಂಗಸು ಹಸುರು ಸೀರೆ ಉಟ್ಟು ಹಸುರು ಕಣ ತೊಟ್ಟು, ಮೈ ತುಂಬ ಒಡವೆ ಇಟ್ಟು ತಲೆಯ ಮೇಲೆ ಒಂದು ವಸ್ತ್ರವನ್ನೊ ಏನೊ, ಸುತ್ತಿದವಳಂತೆ ಇದ್ದವಳು ಬಂದಳು. ಅಂದು ಕರೆಯಲು ಬಂದ ಹೆಂಗಸೇ ಇರಬೇಕು ಇವಳು. ಆದರೆ ಅದು ಕೂಡ ಗುರುತಿಸಲು ಆಗುವಂತಿರಲಿಲ್ಲ.

ಬಂದವಳು ಅವರೆಲ್ಲರನ್ನೂ ಒಂದುಬಾರಿ ನೋಡಿದಳು. 'ನೀವು ಬಂದದ್ದು ನನಗೆ ಬಹಳ ಸಂತೋಷ; ನೀವು ಬರ್ತೀರೋ ಇಲ್ಲವೊ ಎಂತಿದ್ದೆ. ಆದರೆ ಇಂಥ ಒಳ್ಳೆ ಕಾರ್ಯಕ್ಕೆ ಕರೆದರೆ. ಯಾರು ಬರೋಲ್ಲ? ಹೀ! ಹೀ ಹೀ!!' ಎಂದು ವಿಕಟವಾಗಿ ನಕ್ಕಳು. ಅವರ ಎದೆ ನಡುಗಿತು. ಅದೇಕೆ ಹೀಗೆ ನಗುತ್ತಾಳೆ? ಅವಳ ಮುಖ ಸ್ಪಷ್ಟವಾಗಿ ಕಾಣಿಸಲಿಲ್ಲ. ಅದೇನೋ

ಮುಸಕು, ಅಲ್ಲದೆ ತಲೆಗೆ ವಸ್ತ್ರ ಸುತ್ತಿದ್ದಾಳೆ. ಕಣ್ಣು ಮಾತ್ರ ಬೆಕ್ಕಿನ ಕಣ್ಣು ಗಳು. ಅತಿಶ್ರಮದಿಂದ ಅವರೆಲ್ಲ ಮುಖವೆತ್ತಿ ನೋಡಿದರು. ಆ ಕಣ್ಣು ನೋಟದಲ್ಲಿ ಏನೋ ತೀವ್ರತೆ, ಕ್ರೋಧ. ನೋಡಿ ಭಯವಾಯಿತಂತೆ.

ಯಾವಾಗ ಇಲ್ಲಿಂದ ತಪ್ಪಿಸಿಕೊಂಡು ಹೋದೇವೊ, ಎಂದುಕೊಂಡರು.

ಆ ಹೆಂಗಸು 'ಅಷ್ಟು ಅವಸರ ಮಾಡಬೇಡಿ. ಕಾರ್ಯ ಸಾಂಗವಾಗಿ ನೆರವೇರಬೇಕು, ಇವೆಲ್ಲ ಪುಣ್ಯಕಾರ್ಯಗಳು. ಒಬ್ಬರಿಗೊಬ್ಬರು ಸಹಾಯ ವಾಗಬೇಕು.' ತಮ್ಮ ಮನಸ್ಸಿನಲ್ಲಿದ್ದ ಭೀತಿಯನ್ನು ಆ ಹೆಂಗಸು ಹೇಳು ತ್ತಾಳೆ! ಪುಣ್ಯಾತ್ಮಳೆ! ಸಾಕುಮಾಡು, ಎಂದು ಮನಸ್ಸಿನಲ್ಲಿ ಅವರೆಲ್ಲ ಅಂದು ಕೊಂಡರು

ಆ ಮನೆಯ ಇಡೀ ವಾತಾವರಣ, ಸನ್ನಿವೇಶ, ಅವರು ಹೋಗಿದ್ದ ಕಾಲ ಎಲ್ಲ ಹೇಗೋ ಇತ್ತು.

ಆ ಹೆಂಗಸು ಬಂದಳು. ಬಂದು ಒಬ್ಬೊಬ್ಬರನ್ನಾಗಿ ಪೂಜೆಮಾಡಿದಳು. ಕಾಲು ತೊಳೆದಳು, ಬಟ್ಟೆಯಿಂದ ಒರೆಸಿದಳು. ಅರಿಶಿನ ಕುಂಕುಮ ಹಚ್ಚಿ, ಗಂಧ ಬಳಿದು, ಹೂವಿಟ್ಟು, ಧೂಪ ಹಾಕಿ, ಕೈ ಮುಗಿದು ಕಾಲಿಗೆ ಬಿದ್ದಳು. ಆದರೆ ಅವಳಿಂದ ಇಷ್ಟು ಮಾಡಿಸಿಕೊಂಡರೂ ಒಬ್ಬಾಕೆಗೂ ಅವಳ ಕೈ ಸೋಕಿದ ಅರಿವೇ ಆಗಲಿಲ್ಲವಂತೆ. ಕಾಲುಮುಟ್ಟಿ ತೊಳೆದು ಒರಸಿದಾಗ, ಗಂಧ ಪುಷ್ಪ ಅರಸಿನ ಕುಂಕುಮ ಹಚ್ಚಿದಾಗ ಕೈ ಸ್ಪರ್ಶವೇ ತೋರಲಿಲ್ಲವಂತೆ.

ಇಡೀ ದಿನ ಉಪವಾಸವಿದ್ದುದೂ, ಎಣ್ಣೆಹಚ್ಚಿ ಸ್ನಾನ ಮಾಡಿದುದೂ, ನಂತರ ನಡೆದುಬಂದ ಶ್ರಮವೂ, ಈ ವಿಲಕ್ಷಣ ಸನ್ನಿವೇಶ, ಈ ಮನೆ, ಈ ಹೆಂಗಸು; ಇದೆಲ್ಲ ಹುಟ್ಟಿಸಿದ ಭಯ—ಏನೋ ಆಗಿಹೋಯಿತು ಹೆಂಗಸ ರಿಗೆ.

ಆದರೆ ಹೆಂಗಸರು ಐದು ಜನರಿದ್ದರು. ಜನಗುಂಪು ಧೈರ್ಯಕೊಡು ತ್ತದೆ. ತಮಗೆ ತಾವೆ ಧೈರ್ಯ ಹೇಳಿಕೊಳ್ಳುತ್ತಿದ್ದರು.

ಪ್ರತಿಯೊಬ್ಬರ ಮಣೆ ಹತ್ತಿರವೂ ಒಂದು ಹಸುರು ಕಣ, ಎಲೆ ಅಡಿಕೆ,

ತಾಮ್ರದ ನಾಣ್ಯಗಳು ಐದು, ಒಂದು ಕಂಚಿನಪಾತ್ರೆ. ಎಲ್ಲ ಒಂದೇಸಮ, ಒಂದೇ ಆಕಾರ, ಒಂದೇ ಸಂಖ್ಯೆ.

ಹೆಂಗಸು ಊಟಕ್ಕೆ ಬಹಳ ದೊಡ್ಡ ಬಾಳೆಎಲೆ ಹಾಕಿದಳು. ಈ ಹೆಂಗಸರು, 'ಬೇಡ, ನಾವು ಮನೆಗೆ ಹೋಗುತ್ತೇವೆ; ಕಳಿಸಿಕೊಡಿ.' ಎಂದರು.

ಆಕೆ 'ಊಟಮಾಡದೆ ಹೋದರೆ ಹೇಗೆ? ಊಟಮಾಡಿ ಇದೂ ಮನೆಯೆ' ಎಂದಳು.

ಊಟಕ್ಕೆ ಅನೇಕ ಬಗೆಯ ಭಕ್ಷ್ಯಗಳು, ಅನೇಕ ಬಗೆಯ ಪಲ್ಯ, ನಂಚಿಕೆ, ತಿಂಡಿ, ಪಾಯಸ, ಒಂದೆ? ಎರಡೆ? ಎಷ್ಟೊ!

ಆ ಹೆಂಗಸು ಬಹಳ ವಿಶ್ವಾಸದಿಂದ, ಬಹಳ ಒತ್ತಾಯದಿಂದ ಬಡಿಸಿ ಇವರಿಗೆ ತಿನಿಸಿದಳು. ಹೊಟ್ಟೆಗೆ ಅನ್ನ ಬಿತ್ತು, ಹೆಂಗಸರು ಸ್ವಲ್ಪ ಸಮಾಧಾನವಾದರು. ತಾವೆ ಮಾತನಾಡಿಕೊಳ್ಳುವುದು, ನಗುವುದು, 'ಅರಿಯದ ಸ್ಥಳ—ಹೀಗೇ ಎಲ್ಲರಿಗೂ' ಎಂದು ಮಾತನಾಡಿಕೊಳ್ಳುವುದೂ ಆರಂಭವಾಯಿತು.

ಇಷ್ಟು ಆದರೂ, ಇಷ್ಟು ಹೊತ್ತು ಕಳೆದರೂ, ಆ ಒಳಗಿದ್ದವರು ಹೊರಗೆ ಬರಲಿಲ್ಲ; ಮನೆಗೆ ಬಂದವರ ಕೂಡ ಮಾತನಾಡಲಿಲ್ಲ.

ಆ ಹೆಂಗಸು ತಂದಿಟ್ಟ ಪಾತ್ರೆಯೊಂದರಲ್ಲಿ ಇವರು ಕೈತೊಳೆದುಕೊಂಡರು.

'ನೀವು ಬಂದದ್ದು ನಮಗೆಷ್ಟೋ ಉಪಕಾರ; ನಿಮಗೆ ಬಹಳ ಶ್ರಮ ಕೊಟ್ಟೆ; ಹೋಗಿ ಬನ್ನಿ' ಎಂದಳು.

ಇದುವರೆಗೂ ಇವರೊಬ್ಬರೂ ಅವಳೊಂದಿಗೆ ಮಾತನಾಡಿರಲಿಲ್ಲ. ನನ್ನ ಹೆಂಡತಿಗೆ ಏನೊ ಕುತೂಹಲ. 'ಒಳಗಿರುವವರು ಯಾರು? ಅವರು ಬರಲೇ ಇಲ್ಲವಲ್ಲ?' ಎಂದು ಕೇಳೇಬಿಟ್ಟಳು.

'ಯಾರೂ ಇಲ್ಲವಲ್ಲ!' ಎಂದಳು ಆ ಮನೆಯಾಕೆ

'ಮಾತನಾಡುವವರು ಯಾರು?'

'ಯಾರೂ ಇಲ್ಲ.'

ಅಷ್ಟಕ್ಕೆ ಸುಮ್ಮನಾಗಿದ್ದರೆ ತೀರಿಹೋಗಿತ್ತು. ಆದರೆ ಚಿಕ್ಕ ವಯಸ್ಸಿನ

ಚಾಪಲ್ಯ. ಕೇಳಿಸುತ್ತಿರುವುದು ಹೆಂಗಸಿನ ಧ್ವನಿ. ಅದು ಯಾರು ನೋಡೋಣ ಎಂದು ಸರಕ್ಕನೆ ಬಾಗಿ ಒಳಕ್ಕೆ ಹೋದಳು.

ಆ ಮನೆ ಹೆಂಗಸು ಕೂಡಲೆ ಬಂದು ಇವಳನ್ನು ನೂಕಿದಳು. ಏನೋ ಎದೆಗೆ ಬಡಿದಂತಾಯಿತು ಆದರೂ ಒಳಕ್ಕೆ ಹೋಗಿ ನೋಡಿದರೆ ಆ ಆಶ್ಚರ್ಯ ಏನು ಹೇಳಬೇಕು ?

ಒಳಗೊಬ್ಬ ಮಹಾ ಆಕಾರದ ಹೆಂಗಸು ಒಲೆಯೊಳಕ್ಕೇ ಕಾಲುಚಾಚಿ, ಒಲೆ ಉರಿಸುತ್ತಿದ್ದಾಳೆ. ಇವಳ ಕಾಲ ಉರಿಯಿಂದ ಒಲೆ ಉರಿಯಾಗಿ, ಅಡಿಗೆ ಬೇಯುತ್ತಿದೆ. ಈಕೆಯನ್ನು ಕಂಡ ಅವಳ ಕಣ್ಣಿನಿಂದ ಬೆಂಕಿಯೇ ಹಾರಿದಂತಾಯಿತು. ಅಡಿಗೆಮನೆ ಭಗ್ ಎಂದಂತಾಯಿತು.

ಈಕೆ ನೋಡಿದುದಷ್ಟೆ. ಮಹಾ ಭೀತಿಯಿಂದ ಹೊರಕ್ಕೋಡಿಬಂದಳು. ಆ ಮೊದಲ ಹೆಂಗಸು ಕಾಣಿಸಲಿಲ್ಲ. ಹುಡುಗನೂ ಇಲ್ಲ. ಜೊತೆಯ ಹೆಂಗಸರು ಆಚೆ ನಿಂತಿದ್ದರು. 'ಏನಾಯಿತು ? ಏನಾಯಿತು ? ಇದ್ಯಾಕಮ್ಮ ಹೀಗಿದ್ದೀಯ ?' ಎಂದು ಎಷ್ಟು ಕೇಳಿದರೂ ಇವಳು ಹೇಳಳು. 'ಮನೆಗೆ ಹೊರಡೋಣ ; ಇಲ್ಲಿ ಒಂದು ನಿಮಿಷ ನಿಲ್ಲೋದು ಬೇಡ !' ಎಂದಳಂತೆ.

ಎಲ್ಲರೂ ಕಳವಳದಿಂದ, ಮಹಾಭೀತಿಯಿಂದ ಊರ ದೀಪದ ಬೆಳಕುಗಳ ಗುರುತು ಹಿಡಿದು ಊರಕಡೆ ಬಂದು ಮನೆ ಸೇರಿದರು. ಇವರಿಗೆ ಬರುವಾಗ ಅತ್ತಕಡೆ ತಿರುಗಿ ನೋಡುವ ಧೈರ್ಯವಾಗಲಿಲ್ಲ. ನನ್ನ ಹೆಂಡತಿ ದಾರಿಯಲ್ಲಿ ಬರುವಾಗ ಅವರಿಗೆಲ್ಲ ತಾನು ಕಂಡುದನ್ನು ಹೇಳಿದಳಂತೆ.

ಮನೆ ಸೇರಿದಾಗ ನನ್ನ ಹೆಂಡತಿಯ ಮೈ ಕಬ್ಬಿಣ ಕಾದಂತೆ ಕಾದಿತ್ತು. ಅಂದು ರಾತ್ರಿಯೆ ಹಾಸಿಗೆ ಹಿಡಿದು ಮಲಗಿದಳು. ರಾತ್ರಿ ಅಸಾಧ್ಯ ಕನವರಿಸಿದಳು. ಏನೇನೊ ಅಸಂಬದ್ಧವಾಗಿ ಮಾತನಾಡಿದಳು. ಏನೇನೊ ಒದರಿದಳು. ದೆವ್ವ ! ಭೂತ ! ಪಿಶಾಚಿ ! ಹೀಗೆಲ್ಲ.

ಡಾಕ್ಟರು ಬಂದರು. ಏನೇನೊ ಮಾಡಿದರು. ಮಂತ್ರದವನನು ಹುಡುಕಿದುದಾಯಿತು. ಆ ಸಮಯಕ್ಕೆ ಯಾರೂ ದೊರೆಯಲಿಲ್ಲ.

ಮಾರನೆ ದಿನ ಆಕೆ ಸತ್ತುಹೋದಳು.

ಕೆಲವರು ಇಷ್ಟಾದ ಮಾರನೆ ದಿನವೆ ಈ ಸುದ್ದಿ ತಿಳಿದು ಆ ಸ್ಥಳ ಪತ್ತೆ ಹಚ್ಚಬೇಕೆಂದು ಹೊರಟು, ಆರೇಳುಮೈಲಿ ಸುತ್ತಲ ಪ್ರದೇಶವನ್ನೆಲ್ಲ ಹುಡುಕಿದರೂ ಆ ಸ್ಥಳವಾಗಲಿ, ಅದರ ಕಿಂಚಿತ್ ಗುರುತಾಗಲಿ ಸಿಕ್ಕಬಾರದೆ?

ಈ ವಿಷಯವೆಲ್ಲ ಇವಳ ತಲೆಯ ಭ್ರಮೆಯಾಗಿರಬಹುದೊ ಎಂದು ಊಹಿಸಿದರೆ ಇವರು ತಂದ ಕಣ, ಎಲೆ ಅಡಿಕೆ, ದಕ್ಷಿಣೆ, ಆ ಕಂಚಿನ ಪಾತ್ರೆ ಇವೆಲ್ಲ ಇದೆಯಲ್ಲ!

ನಂಬುವುದೆ? ಬಿಡುವುದೆ? ಹೆಂಗಸು ಒಲೆಯೊಳಗೆ ಕಾಲಿಟ್ಟು ಒಲೆ ಉರಿಸುವುದೆಂದರೇನು?"

ಜೀವಣ್ಣರಾಯ ಹೇಳುವುದನ್ನು ನಿಲ್ಲಿಸಿ, ಸಿಟ್ಟುಸಿರು ಕರೆದ.

ನಾಗೇಶರಾಯ, "ಅಯ್ಯೊ! ಈ ಹಾಳು ಹೆಂಗಸರಿಗೇನು ಬಂದಿದ್ದೀತು? ಎಲ್ಲಿಗೆ ಹೋದರೂ? ಅಲ್ಲೇನು ಗತಿಯೊ? ಏನು ಮಾಡ್ಲಪ್ಪ ಈಗ?" ಎಂದು ಕಳವಳದಿಂದ ಎದ್ದು ಅಲ್ಲಿ ಇಲ್ಲಿ ಸುತ್ತಾಡಿದ.

ತಾನು ಹೇಳಬಾರದಾಗಿತ್ತು ಎಂದುಕೊಂಡು ಜೀವಣ್ಣ ಎದ್ದು, ಹೊರಡುವಾಗ ಹೇಳಿದ: "ಏನೊ ಒಬ್ಬರಿಗೆ ಹಾಗಾದರೆ ಎಲ್ಲರಿಗೂ ಹಾಗೇ ಆದೀತೆ? ನಿಮಗೆ ಅಂಥಾ ಕಳವಳ ಬೇಡ; ಬರ್ತಾರೆ ಏಳಿ"

ಜೀವಣ್ಣ ಬಾಗಿಲು ದಾಟಿದಮೇಲೆ ಕೂಗಿ "ನೋಡಿ, ನಿಮ್ಮ ಮನೆಯವರೆ ಬರ್ರೋ ಹಾಗಿದೆ" ಎಂದೂ ಹೇಳಿದ.

ನಾಗೇಶ ಓಡಿಬಂದು, 'ಬಂದೆಯೇನೆ ಹಾಳಾದವಳೆ' ಎಂದು ಹಾರಾಡತೊಡಗಿದ.

"ನೋಡಿ, ಸಾಯಂಕಾಲ, ಅದರಲ್ಲೂ ಶುಕ್ರವಾರ. ಹಾಗೆಲ್ಲ ಬೈಬಾರದು"

"ಸರಿಯಾಗಿದ್ದೀಯೇನೆ?"

"ಸರಿಯಾಗಿಲ್ಲದೆ ಏನು?"

"ನಿನಗೇನೂ ಆಗಲಿಲ್ಲವೆ?"

"ಏನಾಗಬೇಕ್ರಿ? ಏನ್ರೀ ನೀವು? ಹೀಗ್ಯಾಕಾಡ್ತೀರಿ ಇವತ್ತು" ನೆಲದ ಮೇಲೆ ಕುಕ್ಕರಿಸಿಕೊಂಡು ಅಳತೊಡಗಿದಳು—ಗಂಡ ಹೇಳಿದ ಅಮಂಗಳ ಮಾತಿಗೆ.

ನಾಗೇಶನಿಗೆ ಆಗ ಬುದ್ಧಿಕೊಂಚ ತಿಳಿಯಾಯಿತು.

# ದುಡಿಮೆ

ಮ್ಯಾನೇಜರ್ ನರಸಿಂಹಯ್ಯ ತನ್ನ ಬಂಧು ವೆಂಕಟಗಿರಿರಾವ್ ವಿಚಾರ ಬಹಳ ಆಸಕ್ತಿ ವಹಿಸಿದ್ದ. ಕಾರಣ ಕೊನೆಯವನ ಹೆಂಡತಿ ಮೊದಲನೆಯವನ ಗೃಹಿಣಿಯ ಅಕ್ಕ. ವೆಂಕಟಗಿರಿಗೆ ಈಗ ವಯಸ್ಸು ಐವತ್ತರ ಹತ್ತಿರ ಹತ್ತಿರ. ಅವನಿಗೊಂದು ಟೆಂಪೊರರಿ ಮೇಸ್ತ್ರಿ ಕೆಲಸ ಈಗ ದೊರಕಿಸಿಕೊಟ್ಟದ್ದಾಗಿದೆ ಎಂಜಿನೀಯರ್ ರಂಗಸ್ವಾಮಿ ಅಯ್ಯಂಗಾರರಿಗೆ ಹೇಳಿ.

ವೆಂಕಟಗಿರಿಯ ಮೂಗು ಗಿಳಿಮೂಗು; ಹಾಗಿದ್ದರೆ ಬಹಳ ದೆಶೆಯಂತೆ. ಕಣ್ಣುಹುಬ್ಬು ಬಲುದಪ್ಪ, ಬಹಳ ಒತ್ತು ಮತ್ತು ಅತಿ ಕಪ್ಪಗೆ. ಎರಡು ಹುಬ್ಬುಗಳೂ ಕೂಡಿವೆ. ತಲೆ ತುಂಬ ಹಣೆಯೋ! ನೆತ್ತಿಮೇಲೆ ಕೂದಲಿದ್ದರೆ ತಾನೆ? ಇದೇನು? ಮೂಗಿನಿಂದ ನೇರವಾಗಿ ಮೇಲೆ ಹೋದಿರಲ್ಲ—ವರ್ಣನೆ ಯಲ್ಲಿ! ಎನ್ನ ಬೇಡಿ. ಅದನ್ನೂ ಹೇಳುತ್ತೇನೆ ಮೂಗಿನ ಗಾತ್ರ, ಆಕಾರ, ಬಣ್ಣ, ಗಿಡದ ಮೇಲಿರುವ ಗೋಡಂಬಿ ಬೀಜದಂತೆ. ದೊಡ್ಡ ಚಿಟಿಕೆ ನಶ್ಯ ಹೊಳ್ಳೆಗೆ ಏರುವಾಗ ಮುಖ ಮೂಗಿನ ಬಣ್ಣಕ್ಕೆ ತಿರುಗುತ್ತದೆ. ಮೂಗು ಕೊಡವಿ, ಕೈಚಿಟಿಕೆ ಹೊಡೆದು, ಮಾಮೂಲಿ ಚೇಷ್ಟೆಮಾಡಿದಾಗ ನಶ್ಯದ ಹುಡಿ ಹತ್ತಿರ ಇರುವವರ ಕಣ್ಣಿಗೆ ಸೇರಿ ನಶ್ಯದ ಸುಖಾನುಭವ ನಾಸಿಕಕ್ಕೆ ತಪ್ಪಿ ನಯನಕ್ಕೆ ಆಗುತ್ತದೆ. ಮೀಸೆ ಬಿಡುವುದಿಲ್ಲ; ಕಣಿವೆ ಕೆಳಗಿನವರಿಗೆ ಸಾಧಾರಣ. ಮೀಸೆ ಇರುವುದಿಲ್ಲ. ಬಾಯಿಯಲ್ಲಿ ಮುಂದುಗಡೆ

ಹಲ್ಲೊಂದು ಇಲ್ಲದಿದ್ದರೂ ಮುಂದಿನ ಎರಡು ಕೋರೆ ಹಲ್ಲು ಮಾತ್ರ ಗಾತ್ರ ದಲ್ಲಿ ದಪ್ಪನಾಗಿ, ಬಣ್ಣದಲ್ಲಿ ಮಜ್ಜಿಗೆ ಹುಳಿ ಬಣ್ಣಕ್ಕಿವೆ.

ಇಷ್ಟು ವಯಸ್ಸಾದರೂ ಮದರಾಸಿಯಾದ ಅವನು ಲುಂಗಿ ಸುತ್ತು ತ್ತಾನೆ. ತಲೆಗೆ ಏನೂ ಇಡುವುದಿಲ್ಲ. ನ್ಶೈಯ ವಾಸನೆ ದೇಹದ ಗಾತ್ರದಷ್ಟೆ ಬರುತ್ತದೆ. ನಡೆಯುವಾಗ ಒಂದೇ ಕೈಬೀಸಿ ನಡೆಯುವುದೂ ಒಂದು ವೈಶಿಷ್ಟ್ಯ.

ಈ ವ್ಯಕ್ತಿ ಆಗಾಗ ಇಂಗ್ಲಿಷ್ ಪದ ಸೇರಿಸುತ್ತಾನೆ. ಮಾತಿನ ಹುರುಪಿ ನಲ್ಲಿ ತನ್ನದನ್ನು ವರ್ಣಿಸುವಾಗ 'ಡ್ಯಾಮ್' 'ಬಗರ್' ಹೀಗೆಲ್ಲ ಅನ್ನುತ್ತಾನೆ. ತಮಿಳು ಮಾತಿನ ಅಸಾಧ್ಯ ವಡವಡ ಶಬ್ದದ ರೂಢಿ ಕನ್ನಡ ಮಾತನಾಡು ವಾಗಲೂ ಇರುತ್ತದೆ. ನರಸಿಂಹಯ್ಯನಿಗೆ ಆಗಾಗ ಅವನ ವಂಶದ ವರ್ಣನೆ, ಅವರ ಹಿಂದಿನ ವೈಭವ, ವಂಶಕ್ಕೆ ತಕ್ಕ ಅವನ ಭವ್ಯ ಆಕಾರ ಅವುಗಳನ್ನು ವರ್ಣಿಸುತ್ತಾ ಸಿಟ್ಟುಸಿರು ಬಿಡುವಂತಾಗುತ್ತದೆ.

ಇವರಪ್ಪ ಡೆಪ್ಯುಟಿ ಕಲೆಕ್ಟರ್ ಆಗಿದ್ದರಂತೆ. ಅದು ಹಿಂದಿನಕಾಲ. ಇಂಗ್ಲಿಷರು ಈ ಸೀಮೆಯಲ್ಲಿ ರಾಜ್ಯ ನಡೆಸಲು ಆರಂಭಿಸಿದಮೇಲೆ ಈತನ ತಂದೆ ನಾಲ್ಕಾರು ಇಂಗ್ಲಿಷ್ ಅಕ್ಷರ ಕಲಿತು, ಕಣಿವೆ ಕೆಳಗಿನ ಜಿಲ್ಲೆಯಲ್ಲಿ ಎಲ್ಲೋ ಒಂದು ಕಡೆ ಗುಮಾಸ್ತೆಯಾಗಿ ಸೇರಿ ಕೊನೆಯಲ್ಲಿ ಡೆಪ್ಯುಟಿ ಕಲೆಕ್ಟರ್ ಆದರಂತೆ. ಆಗಿನ ಇವರ ಮನೆ ವೈಭವ ಹೇಗಿತ್ತೆಂದರೆ, ತಿಂಗಳ ಕೊನೆಯಲ್ಲಿ ಮೊಸರಿನವಳಿಗೆ ದುಡ್ಡು ಕೊಡಬೇಕಾಗಿದ್ದರೂ ನೂರು ರೂಪಾಯಿ ನೋಟೇ. ಚಿಲ್ಲರೆ ಖರ್ಚಾಗಿ ಅದೇ ಉಳಿದಿರಬೇಕು! ಅವಳೇ ಚಿಲ್ಲರೆ ಮಾಡಿಸಿ ಉಳಿ ದದ್ದನ್ನು ತಂದು ಕೊಟ್ಟರಾಯಿತು, ಇಲ್ಲವೆ ತಾನಿಟ್ಟುಕೊಂಡರೂ ಸರಿ; ಕೇಳುತ್ತಲೆ ಇರಲಿಲ್ಲವಂತೆ.

ಈ ಕುಮಾರರು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಓದುತ್ತಿದ್ದರಂತೆ. ಕುದುರೆ ಜೂಜು ನೋಡಲು ಬೆಂಗಳೂರು ಪೂನಾಗಳಿಗೆ, ಕಲಕತ್ತೆಗೆ ಆಗಾಗ ತೆರಳು

ತ್ತಲೂ ಇದ್ದರಂತೆ ಅಂಥ ವೈಭವದ ಶ್ರೀಮಂತರು ಈಗ ಇಲ್ಲಿ ಟೆಂಪೊರರಿ ಮೇಸ್ತ್ರಿ—ಹಂಗಾಮಿ ಮೇಸ್ತ್ರಿ. ಗೂನುಬೆನ್ನಿನ ಮ್ಯಾನೇಜರು, "ಯಾವ ಕಾಲಕ್ಕೆ ಯಾರಿಗೇನೊ? ಅವರ ವೈಭವ! ಈಗಿನ ಸ್ಥಿತಿ!......."ಅಷ್ಟಕ್ಕೆ ನಿಲ್ಲಿಸುತ್ತಾನೆ ಮಾತು.

ಆಫೀಸಿನಲ್ಲಿ ಅಲ್ಲಿ ಇಲ್ಲಿ ಓಡಾಡಿಕೊಂಡು, ಅವರಿವರ ಕೆಲಸ ಮಾಡಿ ಕೊಟ್ಟು, ಕೊಸರುಕಾಸು ಕಂಟ್ರಾಕ್ಟರಿಂದ ಕಳಚುತ್ತ, ಗುಮಾಸ್ತರಿಂದ ಕಾಫಿ ಗಿಟ್ಟಿಸುತ್ತ ಹಾಗೂ ಹೀಗು ದಿನಕ್ಕೆ ಸಾಕಾದಷ್ಟು ಸಂಪಾದಿಸುತ್ತಿದ್ದ. ಒಬ್ಬರಮೇಲೊಬ್ಬರನ್ನು ಎತ್ತಿಕಟ್ಟುತ್ತ, ಅಲ್ಲಲ್ಲಿ ಪಿತೂರಿ ಫಿರ್ಯಾದುಗಳನ್ನು ಗೋಪ್ಯವಾಗಿ ನಡೆಸುತ್ತ, ಅವನಿಗಿಷ್ಟು ಬಂತು, ಈ ಟೆಂಡರಿನ ವಿಚಾರ ಹೀಗೆ, ಇಂಥಾ ಕಂಟ್ರಾಕ್ಟರ್ ಇಂಥಾ ಕಡೆ ಜಲ್ಲಿಗೆ ಬದಲು ಮಣ್ಣು ಹಾಕಿದ್ದಾನೆ, ಕ್ಯಾಷಿಯರ್ ಕಂಟ್ರಾಕ್ಟರ್ ಹಿಂದೆ ಬಹಳ ಸುತ್ತುತ್ತಿದ್ದ ಇತ್ಯಾದಿಗಳನ್ನು ಅಲ್ಲಲ್ಲಿ ಹರಿಬಿಡುತ್ತ ನಡೆಸಿದ್ದ ತನ್ನ ಮೇಸ್ತ್ರಿ ಜೀವನವನ್ನು.

ತಮಿಳು ಶ್ಲೋಕಗಳು ಕೆಲವನ್ನು ವಳವಳ ಹೇಳಿ ಜಾತಕದ ಫಲ ಬರೆಯುತ್ತೇನೆ, ಮಂತ್ರದ ತಾಯಿತ ಬರೆಸಿ ಪ್ರಮೋಷನ್ ದೊರಕಿಸುತ್ತೇನೆ ಇತ್ಯಾದಿ ಭವಿಷತ್ ವಿಚಾರದ ಭೂತಗಳಲ್ಲೂ ನಂಬಿಕೆ ಹುಟ್ಟಿಸಿ ವ್ಯಾಪಾರ ನಡೆಸುತ್ತ ಕಾಸು ಗಿಟ್ಟಿಸುತ್ತಿದ್ದ.

ಇಂದ್ರಿಯ ಪುಷ್ಟಿಗೆ ಸಿದ್ಧೌಷಧಗಳು, ಧಾತುವೃದ್ಧಿಗೆ ರಸೌಷಧಗಳು, ಇತ್ಯಾದಿಗಳಲ್ಲೂ ಪಳಗಿದ ಕೈ. ಅದನ್ನು ನಿಲ್ಲಿಸುತ್ತೇನೆ, ಇವನ್ನು ಗಟ್ಟಿಮಾಡು ತ್ತೇನೆ, ಹೀಗೆಲ್ಲ ಹೇಳಿ ಕಾಸು ಸಂಪಾದಿಸಿದ ವಿವರ—ಅವೂ ಉಂಟು.

ಇಂಥ ಚಪ್ಪನ್ನಾರು ವಿದ್ಯೆಗಳೊ ಕಲೆಗಳೊ ಅವೇನೊ ಅವುಗಳೆಲ್ಲದ ರಲ್ಲೂ ಪಾರಂಗತನೆನಿಸಿ, "ಏನು ಮಾಡುವುದು? ದೈವ ಖೋಟೆ! ನಾನು ನನ್ನ ಅಂತಸ್ತಿಗೆ ತಕ್ಕಹಾಗೆ ಒಬ್ಬ ಕಲೆಕ್ಟರ್ ಆಗಬೇಕಿತ್ತು; ಲಕ್ಷಾಂತರ ರೂಪಾ ಯಿಗಳ ಷೇರ್ ವ್ಯಾಪಾರ ನಡೆಸಬೇಕಿತ್ತು," ಹೀಗೆಲ್ಲ ಹೇಳಿದರೂ, ಅವನ ದುಡಿಮೆ ಈ ಬಗೆಯ ಪಲ್ಟಿ ಹೊಡೆಯಾಟಗಳಿಂದ ಎಷ್ಟು ಗೊತ್ತೆ? ಮೂರು ಕಾಸಿನ ಕಾಲಿ ದೋಸೆ. ಆರು ಕಾಸಿನ ಕಾಫಿ ನೀರು.

ಅಂತೂ ಆಫೀಸಿನಲ್ಲಿ ಇವನ ಬಾಯಿ, ಇವನ ಓಡಾಟ, ಇವನ ಕೆಲಸ ಎಲ್ಲರ ಕಿವಿಗೂ ಕಣ್ಣಿಗೂ ಬೀಳುತ್ತವೆ.

ಹಳೆಯ ಕ್ಯಾಷಿಯರ್ ವರ್ಗವಾದ. ಮ್ಯಾನೇಜರಿಗೂ ಅವನಿಗೂ ಅವರವರಿಗೆ ಸಲ್ಲಬೇಕಾದ ಬಾಬುಗಳಲ್ಲಿ ಒಬ್ಬರ ಹಕ್ಕುದಾರಿಯನ್ನು ಒಬ್ಬರು ಅತಿಕ್ರಮಿಸಿದರೆಂಬ ಕಾರಣದಿಂದ ವೈಮನಸ್ಸು ಹುಟ್ಟಿ, ಆತನ ಸ್ಥಾನಾಂತರಕ್ಕೆ ಕಾರಣವಾಯಿತೆಂಬ ವಿವರ, ವಿಷಯ ಹಿಂಡಿದಮೇಲೆ ಹಸಿಕಿತು.

ಎಂಜನೀಯರ್ ಇಲಾಖೆಯಲ್ಲಿ, ಎಂಜನೀಯರ್ ಆಫೀಸ್‌ನಲ್ಲಿ, ಮಾವಿನ ಹಣ್ಣು ಮುಟ್ಟಿದರೆ ಸಾಕು, ಉದುರಿಬಿಡುತ್ತವಂತೆ ಎಂದೂ ಹೇಳುತ್ತಾರೆ. ಕೋದಂಡಪಾಣಿಪಿಳ್ಳೆ ಈ ಸ್ಥಾನಕ್ಕೆ ಬಂದ. ಹಿಂದಿನವನು ವಲ್ಲಭೈಯಂಗಾರ್, ಮತ್ತು ಮ್ಯಾನೇಜರ್ ನರಸಿಂಹಯ್ಯ ಇವರುಗಳು ಮನೆ—ಮಹಡಿಗಳನ್ನು ಕಟ್ಟಿಸಿದುದು ಹೇಗೆಹೇಗೊ ಬಣ್ಣಕಟ್ಟಿ ಇಲ್ಲಿನ ದುಡಿಮೆಯಿಂದಲೆ ಮನೆ ಮಹಡಿಗಳಾದವೆಂಬ ಪುಕಾರು ಎದ್ದಿತ್ತು.

ಹಣ ಹೆಚ್ಚಾಗಿ ಕಾಣದ ಪಿಳ್ಳೆ ಇದೇ ಒಂದು ದೈವಕೃಪೆ ಎಂದು ಭಾವಿಸಿ ಬಂದ ಈ ಸ್ಥಾನಕ್ಕೆ. ಸಂಬಳ ಸ್ವಲ್ಪ. ಇವನ ಹೆಂಡತಿ-ಮುತ್ತೈದೆ-ಆಕೆಯ ಫಲ ಬಹಳ. ಇವನಿಗಿನ್ನೂ ಮೂವತ್ತೈದು ಇಲ್ಲ, ಆಗಲೆ ಮಗಳು ಮೈನೆರೆದು ಮದುವೆಗೆ ಅಣಿಯಾಗಿದ್ದಳು. ಬಡ ಗುಮಾಸ್ತೆ-ನಮ್ಮ ಪಿಳ್ಳೆ ಹೇಗೆ ಸಂಸಾರ ನಿರ್ವಹಿಸಬೇಕು? ಏಳು ಮಕ್ಕಳಿಗೆ ಅನ್ನಬಟ್ಟೆ, ಸ್ಕೂಲು ಫೀಜು; ಅದರಲ್ಲಿ ಹುಡುಗಿಯರಿಗೆ ಪೌಡರ್, ಸಿಲ್ಕು ಟೇಪು; ವಯಸ್ಸಿನ ಮಗಳಿಗೆ ಫಿಲೇಚರ್ ಸೀರೆ, ಸಿಲ್ಕ್ ಜಾಕೆಟ್ ಹೇಗೆ ಒದಗಿಸಬೇಕು? ಕೋದಂಡಪಾಣಿಗೆ ತಲೆಯೊಳಗಿನ ಆ ಪದಾರ್ಥ ಕಡಿಮೆ ಎಂದು ಬೇರೆ ಪ್ರಸಿದ್ಧವಾದ ವಿಷಯ. ಬೇರೆ ಎಲ್ಲಿಯೂ ಅಷ್ಟೊಂದು ದುಡಿಮೆಯಿಲ್ಲ. ಕೆಲವರಮನೆಗಳಿಗೆ ಹೋಗಿ ಪಾಠ ಹೇಳುತ್ತಿದ್ದ. ಆದರೆ ಹೇಳಿಸಿಕೊಳ್ಳುತ್ತಿದ್ದ ಹುಡುಗರೆ ಮೂರು ತಿಂಗಳಾಗುವುದರೊಳಗೆ, 'ಅಮ್ಮ ಹೇಳಿದ್ಲು-ಬೇರೆ ಮೇಷ್ಟ್ರನ್ನ ಗೊತ್ತುಮಾಡಿದೀವಿ ಅಂತ,' ಎಂದು ಹೇಳುತ್ತಿದ್ದರು. ಪಿಳ್ಳೆ ಮತ್ತೆ ಹೊಸ ಜಾಗ ಹುಡುಕಬೇಕಿತ್ತು.

ಕೋದಂಡಪಾಣಿ ಇಲ್ಲಿಗೆ ಬಂದು ನಾಲ್ಕು ಕಾಸಿನ ಕನಸು ಕಂಡ.

ಆತುರ ತೋರಿಸಿದ. ಹಿಂದಿನವ ಬಲು ಹುಷಾರಿ. ಆತನಿಗೆ ವರ್ಷಕ್ಕಿದ್ದ ಮಾಮೂಲಿ ಅಲ್ಲದೆ ಇನ್ನೂ ಬಹಳ ಅನುಕೂಲವಿತ್ತು. ಆತನ ಬಗೆ ಬಿಳಿಯ ಕುದುರೆ ಚಾಕರಿಯಂತೆ. ತನ್ನ ಗಿರಾಕಿಗಳಿಗೆ, ಇವತ್ತು ಸಿನೀಮಾ ಆಗಬೇಕು, ಎಂದರೆ ಸರಿ. ಇವನೊಂದಿಗೆ, ಇವನ ಮೂವರು ನೆಂಟರೊ, ತಮ್ಮಂದಿರೊ, ಭಾವಮೈದುನರೂ ಇರುತ್ತಿದ್ದರು. ಒಂಭತ್ತು ಆಣೆ ಸೀಟು ಆಗದು. ಬಿಟ್ಟಿ ದೊರೆಯುವಾಗ ರೂಪಾಯಿಗಿಂತ ಹೆಚ್ಚಾದ ಸೀಟು. ನಾಲ್ಕು ಜನವೂ ಸಿನೀಮ ನೋಡಿ, ನಾಲ್ಕು ಜನವೂ ಸಿನೀಮಾಕ್ಕೆ ಮೊದಲು ಮತ್ತು ಅದಾದ ಮೇಲೆ ತಿಂಡಿ ತಿಂದು ಜಟ್ಕದಲ್ಲಿ ಮನೆ ತಲುಪುವ ಹೊತ್ತಿಗೆ ಕರೆತಂದವನು ಓವರ್‌ಸೀಯರ್ ಆಗಿದ್ದರೂ ಬೇಸಾರ್ಷಿಸಿಯ ಮುಖಮಾಡಿಕೊಂಡಿರುತ್ತಿದ್ದ. ವಲ್ಲಭೈಯಂಗಾರಿಯದು ದೊಡ್ಡತನವಂತೆ.

ಈತ ಹೀಗೆಲ್ಲ ಸುಲಿಯಲು ಅರಿಯ. ಬಂದ ಬಿಲ್ಲಿಗೆ ಸತಾಯಿಸುವುದು, ಟಿ. ಎ. ಬಿಲ್ಲಿನಲ್ಲಿ ಖೋತಾ ಹಾಕಿಸುವುದು ಇವನ್ನೆಲ್ಲ ಮಾಡಲು ಹೇಸುತ್ತಾನೆ. ಆದರೆ ಸಲೀಸಾಗಿ ಮಾಡಿ, ಕಾಸು ಕೊಡು ಎನ್ನುತ್ತಾನೆ. ಇವನು ಕೇಳುತ್ತಾನಲ್ಲ ! ಎಂದು ಹೊಟ್ಟೆಯುರಿ ಆ ಜನಕ್ಕೆ. ಇವನು ಹಲಕ, ಲಂಚ ಪಡೆಯುವ ಘನತೆಯಿಲ್ಲದವನು, ಎಂಬ ಪುಕಾರು.

ಈ ದಿವ್ಯ ಕೆಲಸದಲ್ಲಿ ಅಂತಸ್ತು ಇದೆ. ಮನುಷ್ಯನ ಬುದ್ಧಿ ಚುರುಕಲ್ಲವೆ ? ಎಂಥ ಕಾರ್ಯದಲ್ಲೂ ಘನತೆ ಕೀಳುತನಗಳನ್ನು ಕಾಣುತ್ತಾನೆ ! ಡಿಗ್ನಿಟಿ ಆಫ್ ಲೇಬರ್ (ದುಡಿಮೆಯ ಘನತೆ) ಲಂಚ ಪಡೆಯುವುದರಲ್ಲಿಯೂ ಗೊತ್ತಾಗುತ್ತಿದೆ.

ಕೋದಂಡಪಾಣಿಯಮೇಲೆ ಬಹಳ ಹೊಟ್ಟೆಯುರಿಯಿತ್ತು ಕೆಲವರಿಗೆ. ಗುಸುಗುಸು, ಮುಸುಮುಸು ವ್ಯಾಪಾರ ಬಹಳವಾಗಿ, ಪಿಸುಮಾತಿನ ಪುಕಾರು ಹೆಚ್ಚಾಗಿ ಜಾಣನಲ್ಲದ ಪಿಳ್ಳೆಯ ತಲೆ ಕೆಡಿಸುವಂತೆ ಮಾಡಿತು.

ಸಾಹೇಬ ಏತಕ್ಕೊ ಕರೆಸಿ ಕೂಗಾಡಿದಾಗ, ಈ ಜನ, ಇವನ ಕೆಟ್ಟಚಾಳಿಯನ್ನೆ ಕುರಿತು ಅವರು ಛೀಮಾರಿ ಹಾಕಿರಬೇಕೆಂದೂ, ಮುಂದೆ ಎಚ್ಚರಿಕೆಯಿಂದಿರಲು ಕಟ್ಟುಮಾಡಿದರೆಂದೂ ಆಡಿಕೊಳ್ಳತೊಡಗಿದರು. ನಡೆದ ವಾಸ್ತ

ಶಾಂಶ ಇದು : ಸಾಹೇಬ ಕೆಲವು ವಿಚಾರಗಳಲ್ಲಿ ಕಂಡೂಕಾಣದಂತಿದ್ದ ; ಅವನ ಅಭಿರುಚಿಯೂ ಹಾಗೆಯೇ ಇದ್ದದ್ದರಿಂದ ಇರಬೇಕಾದದ್ದೆ.

ಆದರೆ ಈಗ ಅವನ ಟಿ.ಎ. ಬಿಲ್ ಪಾಸ್ ಆಗಿರಲಿಲ್ಲ. ಹಣ ಬರಲಿಲ್ಲ. ಅವಸ್ಮಾವ್ರ ಒತ್ತಾಯ ನಿಲ್ಲಲಿಲ್ಲ. ಕುಮಾರರ ಕಿರುಕುಳ ತಡೆಯಲಾಗಲಿಲ್ಲ. ಬಂದ ಸಂಬಳ ಬ್ಯಾಂಕಿಗೆ. ಟಿ. ಎ. ಇತ್ಯಾದಿ, ಮನೆ ಸಂಸಾರ ಇತ್ಯಾದಿ ವೆಚ್ಚ ಗಳಿಗೆ. ಕ್ಯಾಷಿಯರ್‌ಮೇಲೆ ಕೂಗಾಡಿದ್ದಕ್ಕೆ, ಪಿಳ್ಳೆ ಓಡಿಹೋಗಿ ಪಾಸ್‌ಮಾಡಿಸಿ, ಹಣ ತರಿಸಿ, ಸಾಹೇಬನ ಮುಖದಲ್ಲಿ ಮತ್ತೆ ನಗೆ ಬರುವಹಾಗೆ ಮಾಡಿದ. ಆದರೆ ಜನರ ಹೇಳಿಕೆ ಕೇಳಿ ರೇಗಿದ ಪಿಳ್ಳೆ, 'ನನ್ನ ಯಾರೂ ಅಲ್ಲಾಡಿಸೋಕಾಗೋಲ್ಲ ಮಿಸ್ಟರ್ !' ಎಂದು ಇಂಗ್ಲಿಷಿನಲ್ಲಿ ಹೇಳುತ್ತ, ತನ್ನ ಬಲಗೈ ಹೆಬ್ಬೆರಳನ್ನು ಆಡಿಸತೊಡಗಿದನು. ಮುಂದಕ್ಕೆ ಬಗ್ಗಿದಾಗ–ಇವನ ಮಾತಿಗೆ ಹೌದೆಂದು ಹೇಳುತ್ತ, ಎಡಬಲಗಳಲ್ಲಿ ಸುತ್ತುತ್ತಿರುವಾಗ–ಇಲ್ಲ, ನನ್ನ ದಣಿಯನ್ನು ಯಾರೂ ಅಲ್ಲಾಡಿಸುವುದಕ್ಕಾವುದಿಲ್ಲ–ಎಂಬುದನ್ನು ತೋರಿಸುತ್ತ, ಈ ಮೊಂಡ ಹೆಬ್ಬೆರಳು ಆಡುತ್ತಿತ್ತು. ನೋಡುವವರ ಕಣ್ಣಿಗೆ ಅದೊಂದು ಕೋತಿ ತಿಮ್ಮಣ್ಣನ ಆಟವಾಗಿತ್ತು.

ಪಿಳ್ಳೆ ಹೋಟೆಲಿಗೆ ಹೋಗುತ್ತಿರಲಿಲ್ಲ. ಆಫೀಸಿಗೆ ಬರುವಾಗ ಮನೆಯಿಂದಲೆ ತಂದ ತಿಂಡಿಯನ್ನೆ ತಿನ್ನುತ್ತಿದ್ದ. "ನಾವು ಬಡವರು : ತಿಂಡಿಗೆಲ್ಲ ಕಾಸು ಇಲ್ಲಪ್ಪ," ಎನ್ನುತ್ತಿದ್ದ. ದಂಡಿನಲ್ಲಿ ಬಂದದ್ದು ಧಾಳಿಯಲ್ಲಿ ಹೋಗಲಿ ! ಎಂದು ಉಳಿದವರು ಉಡಾಯಿಸುತ್ತಾ ಇದ್ದರು ಅಲ್ಲದೆ ಪ್ರತೀತಿ ಬೇರೆ–ಹಲಕ ಕಾಸು–ಲಂಚದ್ದು ಉಳಿಯೋಲ್ಲ, ಎಂಬುದು. ಪಿಳ್ಳೆಯ ಈ ಉಳಿತಾಯದ ಮನೋಭಾವ–ಅದೂ ಕುಚೋದ್ಯಕ್ಕೆ ಕಾರಣವಾಗಿತ್ತು.

ನಾವು ಮಾಡಿದಹಾಗೆ ಇನ್ನೊಬ್ಬರು ಮಾಡದಿದ್ದರೆ ಅದು ನಮಗೆ ವಿಲಕ್ಷಣ; ಇಷ್ಟೆ ಅಲ್ಲ, ಸಹಿಸುವುದಕ್ಕೂ ಆಗುವುದಿಲ್ಲ, ಅಲ್ಲವೆ? ಎಲ್ಲರೂ ಎರಡೂವರೆಗೆ ತಿಂಡಿಗೆದ್ದು ಹೋದಾಗ ಪಿಳ್ಳೆ ತನ್ನ ರೂಮಿನಲ್ಲೆ ಕೂತಿರುವುದು, ಅದೊಂದು ಬಗೆಯ ಪುಕಾರಿಗೂ ಕಾರಣವಾಯಿತು. 'ಯಾರೂ ಇಲ್ಲದಾಗ ಬಂದವರೊಂದಿಗೆ ಮಾತನಾಡುವುದು ಸುಲಭ; ಗಿಟ್ಟಿಂಗ್ಸ್ ಸಲೀಸಾಗಿ ನಡೆಸ

ಬಹುದು.' ಕನ್ನಡದ ಗಿಟ್ಟಿಸು ಶಬ್ದ ಇಂಗ್ಲಿಷ್ ಟೋಪಿಹಾಕಿ ಗಿಟ್ಟಿಂಗ್ಸ್ ಆಗಿತ್ತು. ಈ ಗಿಟ್ಟಿಂಗ್ಸ್ ವಿಚಾರ ಹೆಚ್ಚಿನ ಗಲಾಟೆ ಇವನದೆ--ಈ ಟೆಂಪೊರರಿ ಮೇಸ್ತ್ರಿ ವೆಂಕಟಗಿರಿಯದು. ಅವನು ಕ್ಯಾಷಿಯರ್‌ಗೆ ಲೆಕ್ಕಪತ್ರಗಳಲ್ಲಿ ಸಹಾಯಕನಾಗಿರತಕ್ಕದ್ದೆಂದು ವಾಡಿಕೆಯಾಗಿಬಂದ ಅವನ ಅಧಿಕಾರ ವಿವರಣೆ· ಉಳಿದವರಿಗೂ ಸಹಾಯಕ. ಆದರೆ ಇವನು ಕ್ಯಾಷಿಯರ್ ರೂಮಿನಲ್ಲೆ ಕೂತಿರಬೇಕಾದದ್ದರಿಂದ—ಇನ್ನೂ ಬೇರೆ ಕಡೆ ಸ್ಥಳವಿರಲಿಲ್ಲ—ಹಿಂದಿನ ಕ್ಯಾಷಿಯರ್‌ಗೆ ಇವನು ಸಹಾಯಕ.

ಹೊಸಬ ಬಂದರೆ ಉಳಿದವರು ಕಿರುಕುಳ ಕೊಡುವುದು, ತಾತ್ಸಾರವಾಗಿ ಕಾಣುವುದು, ಅವನ ವಕ್ರತನಗಳನ್ನು ಆಡಿಕೊಳ್ಳುವುದು ಇವೆಲ್ಲ ನಡೆದು ಬಂದ ವಿಚಾರ. ಹಾಗೆಯೇ ನಡೆಯಿತು. ಪಿಳ್ಳೆಗೆ ಗಿರಿ ಸಹಾಯಮಾಡಲಿಲ್ಲ. ಅವನ ಏಜೆಂಟ್ ಆಗಿ ಕಂಟ್ರಾಕ್ಟರ್ ಹತ್ತಿರ ಸುತ್ತಾಡಲಿಲ್ಲ. 'ನನ್ನ ಕೆಲಸ ನಾನೇ ಮಾಡಿಕೊಳ್ಳುತ್ತೇನೆ,' ಎಂದ ಪಿಳ್ಳೆ, ಆದರೆ ಕೂಡುವುದು, ಉಳಿದ ಕಾಗದಗಳ ಲೆಕ್ಕ ಇಡುವುದು ಇವನ್ನು ಮಾತ್ರ ಅವನಿಗೆ ಬಿಟ್ಟಿದ್ದ. ಗಿರಿಗೆ ಮನಸ್ಸಿನ ಕಿರಿಕಿರಿ ಹೆಚ್ಚಾಯಿತು.

ಒಂದ ದಿನ, ಕ್ಯಾಷಿಯರ್ ತಿಂಡಿ ತಿನ್ನುತ್ತ ಕುಳಿತಿದ್ದಾಗ ಈ ಗಿರಿ ಎದ್ದು, ತನ್ನನಂಟ ಮ್ಯಾನೇಜರ್ ಬಳಿ ಹೋಗಿ, 'ಇದೇನ್ ಸಾರ್, ಈ ಪಿಳ್ಳೆ ಮಾಂಸಾನೆಲ್ಲ ತಂದು ತಿನ್ನುತ್ತಾರೆ ಆಫೀಸಿನಲ್ಲಿ? ನಾವ್ಹೆಂಗೆ ಸಹಿಸಿಕೊಂಡು ಇರೋದು ?' ಎಂದು ಹೇಳಿಕೊಂಡ. ಯಾರು ಏನು ತಿಂದರೆ, ಇದಕ್ಕೆ ಮ್ಯಾನೇಜರ್ ಏನು ಮಾಡುವುದಕ್ಕಾದೀತು? ಇದು 'ಸರ್ಕಾರಿ ನೌಕರರ ನಡವಳಿಕೆ'ಯಲ್ಲಿ ನಮೂದಾಗದ ವಿಚಾರ. ಅದರಮೇಲೆ ಯಾವ ಕ್ರಮ ? 'ಇರಲಿ ಹೋಗಿ,' ಎಂದು ಮ್ಯಾನೇಜರ್ ಗದರಿಕೊಂಡ. ಗಿರಿ ಅಷ್ಟಕ್ಕೆ ಬಿಟ್ಟನೆ ? 'ಏನು ವಾಸನೆಯೊ ಹಾಳು ಈ ಪಲಾವ್ ವಾಸನೆ !' ಎಂದ.

ಪಿಳ್ಳೆಗೆ ರೇಗಿತು. 'ಏನಯ್ಯ ! ಪಲಾವ್ ತಿನ್ನದೆ ಪಲಾವ್ ವಾಸನೆ ಹೇಗೆ ಗೊತ್ತು ನಿನಗೆ? ಮಾಂಸದ ಅಡಿಗೆ ತಿನ್ನದ ನೀನು ಮಾಂಸ ಇದು ಅಂತ ಹ್ಯಾಗೆ ರುಚಿ ಹಿಡಿದೆ ?'

ಗಿರಿ ಬಾಯಿ ಮುಚ್ಚಿಕೊಳ್ಳಬೇಕಾಯಿತು. ಆದರೆ ಹಿಂದಿನ ಪರಿಚಯ ವಿಶೇಷದಿಂದ ಕೆಲವು 'ಮಿಲಿಟ್ರಿ' ಹೋಟೆಲುಗಳು ನೆನಪಿಗೆ ಬಂದು ಮಿಂಚಿ ಹೋದವು. ಉಳಿದವರು, ಪಿಳ್ಳೈ ದಬಾಯಿಸಿದ್ದಕ್ಕೆ ಗೊಳ್ಳೆಂದು ನಕ್ಕರು. 'ಪಿಳ್ಳೈಗೆ ತಲೆಯಿಲ್ಲ ಅಂತ ಯಾರು ಹೇಳಿದರು? ತಲೆ ಓಡಿಸೋಲ್ಲ ಅಷ್ಟೆ,' ಎಂದ ಮ್ಯಾನೇಜರ್ ಸಮಾಧಾನಪಡಿಸಲು. ಮ್ಯಾನೇಜರ್ ನಿಷ್ಪಕ್ಷಪಾತಿಯಾಗಿರಬೇಕಷ್ಟೆ! ಆದರೆ ಮಿ॥ ಜಮಾಲ್, 'ಪಿಳ್ಳೈ ತಲೆ ವರ್ಣಿಸೋಕೆ ಹೋಗಿ ಮ್ಯಾನೇಜರ್ ಉಳಿದಿರೊ ತಲೇನೂ ಕಳಕೊಂಡ!' ಎಂದ. ಅವನಿಗೂ ಈ ಹಾಸ್ಯ ಅರ್ಥವಾಗಿತ್ತು.

ಇದಾಗಿ ಕೆಲವು ದಿನಗಳಾದವು. ಪಿಳ್ಳೈಯ ಮೇಲೆ ವೆಂಕಟಗಿರಿಯ ಮುನಿಸು ಇನ್ನೂ ಆರಿರಲಿಲ್ಲ. ಹೆಚ್ಚಾಗಿಯೋ ಇರಬೇಕು. ಒಂದು ದಿನ ಟೆಂಡರ್ ಡಿಪಾಸಿಟ್ ಹಣ ಬಹಳ ಬಂದಿತು. ನಾಲ್ಕಾರು ಕೆಲಸಗಳ ಕಾಂಟ್ರ್ಯಾಕ್ಟ್ ಒಂದೇಬಾರಿ ಟೆಂಡರಿಗೆ ಬಂದು ಕೆಲವು ಸಾವಿರ ರೂಪಾಯಿಗಳ ತನಕ ಹಣ ಜಮಾ ಆಯಿತು. ಲೆಕ್ಕ ಸಲೀಸಾಗಿದೆ. ಎಲ್ಲ ದುಂಡು ಅಂಕಿಗಳಲ್ಲೆ ಜಮಾ ಆಯಿತು. ಆದರೆ ಎಲ್ಲೊ ಹತ್ತು ರೂಪಾಯಿ ಕಡಿಮೆ ಆಗಿದೆ. ಎರಡು ಗಂಟೆಗೆ ಟ್ರೆಜರಿಗೆ ಕಟ್ಟಬೇಕು. ಕೂಡಿಕೂಡಿ ಹಾಕಿದ್ದಾಯಿತು. ಎಲ್ಲಿ ಹೋಯಿತೊ ಆ ಹತ್ತು ರೂಪಾಯಿ? ಗೊತ್ತಾಗಲಿಲ್ಲ. ಪಿಳ್ಳೈಗೆ ಹಣದ ವಿಚಾರ ಬಹಳ ಎಚ್ಚರಿಕೆ. ಸಾಧಾರಣ ಬಡವರೆಲ್ಲ ಹಾಗೆಯೆ ಸರ್ಕಾರದ ಹಣ-ಎಚ್ಚರಿಕೆ ಬೇಡವೆ? ಎಷ್ಟಿದ್ದರೂ ಸಾಲದು. ಕಂಟ್ರ್ಯಾಕ್ಟರ್ ಹಣ ಕೊಟ್ಟಾಗ ಎಲ್ಲ ಸರಿಯಾಗಿ ಎಣಿಸಿದ್ದ. ಸರಿಯಾಗಿ ಲೆಕ್ಕ ಬರೆದುಕೊಂಡಿದ್ದ. ತಾನೆಲ್ಲೂ ಎದ್ದುಹೋದಹಾಗೆ ನೆನಪಿಲ್ಲ. ಮೇಜಿನ ಮೇಲೆ ಹಣ ಇತ್ತು. ಇದ್ದರೇನು, ತಾನು ಎದುರಿಗೆ ಸರ್ಪಕಾವಲಾಗಿ, ಹದ್ದಿನ ಕಣ್ಣಿಟ್ಟುಕೊಂಡು ಕುಳಿತಾಗ? ಆದರೆ ಕಡಿಮೆ ಹೇಗೆ ಆಯಿತು?

ಪಿಳ್ಳೈ ಯೋಚಿಸಿದ; ಇಲ್ಲಿಗೆ ಬಂದವರನ್ನು ಜ್ಞಾಪಿಸಿಕೊಂಡ. ಎಲ್ಲರೂ ಬಂದು ಹೋಗಿದ್ದರು. ಬಂದುಹೋದರೆ ಹಣ ಹೋಗಬೇಕೆ? ಈ ಮೇಸ್ತ್ರಿ— ಹಂಗಾಮಿ ಮೇಸ್ತ್ರಿ—ಡೆಪ್ಯುಟಿ ಕಲೆಕ್ಟರ್ ಮಗ ವೆಂಕಟಗಿರಿ ಇವನೂ

ರೂಲರ್ ತೆಗೆದುಕೊಳ್ಳಲು ಬಂದಿದ್ದ. ಫಕ್ಕನೆ ಮನಸ್ಸಿಗೆ ಹೊಳೆದಂತಾಯಿತು. ಆರನೆ ಕರಣ (ಸಿಕ್ಸ್ತ್ ಸೆನ್ಸ್) ಒಂದು ಇದೆಯಂತೆ. ಅದು ಹೇಳಿತು—'ಕದ್ದ ಕಳ್ಳನೇ ಈ ಗಿರಿ!'

ಮ್ಯಾನೇಜರನ ನಂಟನನ್ನು, 'ನೀನು ಕಳ್ಳ! ಕೊಡು ನನ್ನ ಹತ್ತು ರೂಪಾಯಿ' ಎಂದು ಕೇಳಲಾದೀತೆ! ಬಡವ ಪಿಳ್ಳೆ ಬಲು ಮಿಡುಕಿದ. ಹಿಂದೆ ಮ್ಲೇಚ್ಛಾದಿಗಳ ಎಂಜಲು, ಉಗುಳು ತಗುಲಿದರೆ ಜಾತಿ ಹೋಗುತ್ತಿತ್ತಂತೆ. ಸರ್ಕಾರದ ಹಣ ಹೀಗೆ ಹೆಚ್ಚು ಕಡಿಮೆ ಆದರೆ ಅದು 'ಅಪಾವನೆ.' ಅದೂ ಒಂದು ಅಪರಾಧ. ಅದರ ಪರಿಣಾಮ: ಕೆಲಸಹೋದೀತು; ಜೈಲಾದೀತು.

ಪಿಳ್ಳೆ ಸಂಕಟದಿಂದ ಕೈಯಿಂದ ತೆತ್ತ. ಭರ್ತಿಮಾಡಿ, ಟ್ರೆಜರಿಗೆ ಕಟ್ಟಿದ. ತನ್ನೊಂದಿಗೆ ಸಹಾನುಭೂತಿ ತೋರಿಸುತ್ತಿದ್ದ ಗುಮಾಸ್ತೆಗಳೊಂದಿಗೆ, 'ಈ ಲುಚ್ಚಾ ಮೇಸ್ತ್ರಿಯಿಂದ ಹೀಗಾಯಿತು!' ಎಂದು ಹೇಳಿಕೊಂಡ.

ಪಿಳ್ಳೆಯ ದುರ್ದೈವ ಏನು ಹೇಳೋಣ? ಮೊದಲನೆಯ ತಾರೀಖಿನ ದಿನ ಸಂಬಳ ಬಟವಾಡೆ ಮಾಡುವಾಗ ಮೂವತ್ತೈದು ರೂಪಾಯಿ ಹೀಗೆಯೇ ನುಣುಚಿಕೊಂಡು ಹೋಯಿತು. ಎಲ್ಲರನ್ನೂ ಕೇಳಿಕೊಂಡು ಬಂದ. 'ಏನಾದರೂ ಹೆಚ್ಚು ಕೊಟ್ಟಿದ್ದೇನೆಯೇ? ನೋಡಿ, ಇದ್ದರೆ ಕೊಡಿ,' ಎಂದು ಬೇಡಿದ. ಕಳೆದ ಹಣ ಬಂದೀತೆ? ಹೋಯಿತು. ಬಡವ, ಮಗಳಿಗೆ ಒಂದು ಫೀಲೇಚರ್ ಸೀರೆ—ಆಗ ಅತಿ ಎಂದರೆ ಮೂವತ್ತು ರೂಪಾಯಿನದು—ತಂದುಕೊಡಲಾಗದಿದ್ದವನು, ನಲವತ್ತೈದು ರೂಪಾಯಿ—ಅವನ ಒಂದು ತಿಂಗಳ ಸಂಬಳ—ಒಂದೇ ತಿಂಗಳಲ್ಲಿ ಕಳುವಾಗಿ ಹೋದರೆ ಏನು ಮಾಡಿಯಾನು? ಸಾಹೇಬರಲ್ಲಿ ಫಿರ್ಯಾದುಮಾಡಿ ಈ ಗಿರಿ ತನ್ನ ರೂಮಿನಲ್ಲಿ ಇರುವುದು ಬೇಡ—ಹಣದ ವಿಚಾರ—ತಾನೊಬ್ಬನೆ ಇರಬೇಕು, ಎಂದು ಹೇಳಿದ. ಸಾಹೇಬ ಗಿರಿಯನ್ನು ಅಲ್ಲಿಂದ ಕಿತ್ತು, 'ಕೆಲಸನೋಡುವ ಮೇಸ್ತ್ರಿಯಾಗಿ, ಕೂಲಿಗಳ ಹೆಗ್ಗಡೆಯಾಗಿ ಅಲ್ಲಿರು, ಹೋಗು!' ಎಂದು ಬಿಸಾಡಿದರು.

ಇಲ್ಲಿಯ ವಿಶ್ರಾಂತಿ, ಕಾಫಿ, ಲಲ್ಲೆಯಮಾತು, ಕೊಸರುಕಾಸು, ಹಿಂದೆ

ನಡೆದ ಬಗೆಯು ಜೇಬಿಗೆ ಇಳಿಬಿಡುವ ಆಟ ಈ ಪಿಳ್ಳೆಯಿಂದ ತಪ್ಪಿದ್ದಕ್ಕಾಗಿ ವೆಂಕಟಗಿರಿ ಬಹಳ ಗೋಳಾಡಿ, ಶಪಿಸಿ ಹೋದನು.

ಪಿಳ್ಳೆ, 'ಹಾಯಾಗಿದ್ದೇನೆ ಈಗ!' ಎಂದುಕೊಂಡ. ವೆಂಕಟಗಿರಿ ಆಗಾಗ ಆಫೀಸಿಗೂ ಬರುತ್ತಿದ್ದ. ಸಿಲ್ಕ್ ಪರಟು ಹಾಕಿ, ಮದರಾಸಿಗಳು ಕೊರಳಿಗೆ ಸುತ್ತುವ ಕರಿಯ ಜರತಾರಿ ಉತ್ತರೀಯವನ್ನು ಸುತ್ತಿಕೊಂಡು, ಪಂಚಕಚ್ಚೆ ಪಂಚೆ ಉಟ್ಟು, ತಮಿಳರ ಅಣ್ಣಾತೆ ವೇಷದಲ್ಲಿ ಬರುತ್ತಿದ್ದ. ಎಲಾ! ಈ ಮೇಸ್ತ್ರಿಗೆ ಇದೇನು ಷೋಕು! 'ಮುತ್ತು ಹುಳಿತರೆ ಜೋಳಕ್ಕೆ ಸಮನೆ?' ಒಂದು ಗಾದೆ. ಅದನ್ನೆ ಇವನ ಮ್ಯಾನೇಜರ್ ನಂಟ ಹೇಳಲು ಕಲಿತಿದ್ದ. ನುಣುಪಾದ ನೆತ್ತಿಯ ಅಲ್ಲೊಂದು ಇಲ್ಲೊಂದು ಕೂದಲನ್ನು ನುಣ್ಣಗೆ ಬಾಚಿ, ಕಪ್ಪೆಯಾಕಾರದ ನಾಲಗೆಯನ್ನು ಬಾಯಿತುಂಬ ಆಡಿಸಿಕೊಂಡು 'ಅವರು ಇವತ್ತು ಸಿಕಂದರಾಬಾದಿನಿಂದ ಬಂದರು,' 'ಇವರು ಮದರಾಸಿನಿಂದ ಬಂದರು' ಎನ್ನುತ್ತಾ, ಒಳಬಳ ಮಾತನಾಡುತ್ತ ಬರುತ್ತಿದ್ದ. ತಮಿಳನಾದರೂ ಪಿಳ್ಳೆಗೆ ಅವನನ್ನು ಕಂಡರೆ ಆಗದು. ಆದರೆ ಪಿಳ್ಳೆ ಒಂದು ತಂಟೆಯವನಲ್ಲ.

ಮಗಳ ಕಾಟ ಬಹಳವಾಯಿತು. ಪಿಳ್ಳೆ ಚಿಕ್ಕಪೇಟೆಗೆ ಬಂದು ಒಂದು ಸೀರೆ ಕೊಂಡೇಬಿಟ್ಟ ಇಪ್ಪತ್ತೇಳು ರೂಪಾಯಿಗೆ. ದಾರಿಯಲ್ಲಿ ಇವನ ಚಪ್ಪಲಿ ಕಿತ್ತುಹೋಯಿತು. ಕೈಯಲ್ಲಿ ಸೀರೆ, ಇನ್ನೊಂದರಲ್ಲಿ ಇವನ ಚೀಲ—ಅದರಲ್ಲಿ ಟಿಫಿನ್ ಡಬ್ಬ. ತಿಂಡೀಚೀಲದಲ್ಲಿ ಹಳೇ ಎಕ್ಕಡ ಸೇರಿಸಲು ಮನಸ್ಸಾಗಲಿಲ್ಲ. ಸೀರೆ–ಹೊಸ ಸೀರೆ, ಮದುವೆಗೆ ಬಂದ ಮಗಳಿಗೆ—ಕನ್ಯನೋಡಲು ಬಂದಾಗ ಇರಲಿ, ಎಂದು ಬಡವ ತಂದ ಸೀರೆಯೊಂದಿಗೆ, ತನ್ನ ಹರಕು ಚಪ್ಪಲಿ—ಅಮಂಗಲದ ಎಕ್ಕಡ ಸೇರಿಸಿ ಹಿಡಿದುಕೊಳ್ಳಲು ಮನಸ್ಸಾಗಲಿಲ್ಲ. ಹಾಗೇ ಕಾಲೆಳೆದುಕೊಂಡು ಕಂಟೋರ್ನಮೆಂಟ್ ಬ್ಲಾಕ್‌ಪಲ್ಲಿಯ ತನಕ ಹೋಗುವುದಾದರೂ ಹೇಗೆ? ಸೈಕಲ್ ಪಂಕ್ಚರ್ ಆಗಿ ಮನೆಯಲ್ಲೆ ಇತ್ತು. ಬಳೇ ಪೇಟೆಯ ಒಂದು ಓಣಿಗೆ ಬಂದು ಅಲ್ಲಿ ಎಕ್ಕಡ ಸರಿಮಾಡುತ್ತಿದ್ದವನಿಗೆ ತನ್ನ ಪಾದರಕ್ಷೆ ಇತ್ತು ನಿಂತುಕೊಂಡ. ಸಂಜೆಯಾಗಿದೆ. ದೀಪ ಹೊತ್ತಿಕೊಂಡಿವೆ. ದೂರ ಹೋಗಬೇಕು. ಎಕ್ಕಡ ರಿಪೇರಿ ಭರದಿಂದ ನಡೆದಿಲ್ಲ. ಅವನಿಗೇನು

ಕೆರೆದಂಡೆಯ ಹುಳಿಸೀರಿನ ಅಂಗಡಿಯ ಮೇಲೊ, ಏನೊ, ಲಕ್ಷ್ಯ ಇದ್ದಂತೆ ಇದೆ. ಜಾಗ್ರತೆಮಾಡ.

ಮೂರು ನಾಲ್ಕು ಜನ ಅತಿ ನವುರಾದ ಬಟ್ಟೆಯುಟ್ಟವರು, ಅತಿ ಶ್ರದ್ಧೆಯಿಂದ ಕೂದಲು ತಿದ್ದಿದವರು, ಅತಿಯಾದ ವಾಸನೆ ಬೀರುವವರು ಅವರೂ, ತಮ್ಮಸೆರಗಿನಲ್ಲಿ ಮರೆಯಾಗಿ ತಂದ ಕಸೂತಿ ಕೆಲಸದ ಮಖಮಲ್ ಎಕ್ಕಡಗಳನ್ನು ಹಾಕಿ, "ಇವನ್ನು ಜಾಗ್ರತೆ ಸರಿಮಾಡಿಕೊಡು; ಹೊತ್ತು ಆಗಿದೆ; ಹೋಗಬೇಕು" ಎಂದು ತಗಾವೆ ಮಾಡಿದರು. "ಆಗಲಿ! ಆಗಲಿ! ನಿಮಗೆ ಜರೂರು ಜಾಸ್ತಿ! ಈಗಲೆ ಮಾಡಿದೆ. ಈ ಬುದ್ಧಿಯೋರು ಕಾದವರೆ. ಅಲ್ಲರಾ?" ಎಂದ ಮೋಚಿ, ಮೊದಲು ಬಂದವನ ಎಕ್ಕಡ ಬಿಟ್ಟೇಬಿಟ್ಟು ಈ ಹೊಸಬರ ಎಕ್ಕಡ ಸರಿಮಾಡಲು ತೊಡಗಿದ.

ಪಿಳ್ಳೆ ಗಲಾಟೆಮಾಡಿದ. ಆಗ ಒಂದು ಧ್ವನಿ, ಪರಿಚಿತವಾದ ಧ್ವನಿ, ನಗುತ್ತ, ಹೆಂಗಸರನ್ನು ನೋಡುತ್ತ, "ಬಿಡಿ ಮಿಸ್ಟರ್ ಪಿಳ್ಳೆ, ಹೆಂಗಸರು, ಅವರದು ಮೊದಲಾಗಲಿ," ಎಂದಿತು. ನೋಡಿದ ಪಿಳ್ಳೆ. ಇವನೆ—ಜೇಬಿಗೆ ಬಿಟ್ಟ ಗೆಳೆಯ—ಗಿರಿ! ಎಲಾ! ಇಲ್ಲಿಯೂ ಇದ್ದಾನಲ್ಲ! ಎಂದುಕೊಂಡು ಅವನು ನೋಡುತ್ತಿದ್ದರೂ ತನ್ನ ಜೇಬು, ಕಂಕುಳಲ್ಲಿದ್ದ ಸೀರೆ ಎಲ್ಲ ಮುಟ್ಟಿ ನೋಡಿಕೊಂಡ.

ಹೆಂಗಸರು ನಗುಮುಖದಿಂದ, "ಇವರು ನಿಮಗೆ ಪರಿಚಯವಾ?" ಎಂದರು.

"ಬರಿ ಪರಿಚಯ ಏಕೆ? ಬಹಳ ದೋಸ್ತಿ. ಇವರೂ ನಾವೂ ಒಂದೇ ಆಫೀಸಿನಲ್ಲಿದ್ದೇವೆ. ನಮ್ಮ ಕ್ಯಾಷಿಯರ್ ಇವರು. ಬಹಳ ಒಳ್ಳೆಯವರು."

ಹೆಂಗಸರು, "ಮುಖ ನೋಡಿದರೆ ಗೊತ್ತಾಗೋಲ್ಲವೆ? ಅದೇನು ಕಂಕುಳಲ್ಲಿರುವುದು? ಸೀರೆ ಇದ್ದಹಾಗೆ ಕಾಣಿಸುತ್ತದೆ. ಹೊಸದಾಗಿ ತಂದಿರೇನು?" ಎಂದು ಹೇಳುತ್ತ ಕೈಚಾಚಿದರು.

"ಇದೇನು! ಬೀದಿ, ಇಲ್ಲೆಲ್ಲಾ ಬಿಚ್ಚೋದೆ!" ಎಂದ ಪಿಳ್ಳೆ.

"ಹಾಗಾದರೆ ಬನ್ನಿ ಮನೆಗೆ; ಅಲ್ಲೆ ನೋಡಿದರಾಯಿತು."

"ಎಲ್ಲಿ ನಿಮ್ಮ ಮನೆ?"

"ನೋಡಿ, ಅಲ್ಲೆ ಕಾಣಿಸುತ್ತದಲ್ಲ, ಆ ಮಹಡಿಮನೆ, ಅದೇನೆ ಮನೆ" ಎಂದ ವೆಂಕಟಗಿರಿ.

"ಇವರಿಗೂ ನಿಮಗೂ ಏನಾಗಬೇಕು?" ಹೀಗೆ ಕೇಳಿದ ಅರಿಯದ ಪಿಳ್ಳೆ.

"ನಮ್ಮ ಗಂಡಸರ ಸ್ನೇಹಿತರು" ಎಂದರು ಹೆಂಗಸರು.

"ಆದರೆ ಇವರು ನಿಮ್ಮೊಂದಿಗೆ ಬಹಳ ಸಲಿಗೆಯಿಂದಿದ್ದಾರೆ!"

"ನೀವು ಸಲಿಗೆಯಿಂದ ಇರಬೇಡಿ ಅಂತ ಯಾರು ಅಡ್ಡಿಮಾಡಿದರು?" ಗಿರಿ ಕೇಳುತ್ತಾನೆ.

ಪಿಳ್ಳೆಗೆ ತಿಳಿಯದಾಯಿತು ಈ ಜಗತ್ತು.

ಮೋಚಿ, "ಹೋಗಿ ಸ್ವಾಮಿ! ಸಾಯಂತ್ರದ ಹೊತ್ತು. ನೀವು ಬರೋದ್ರಾಗೆ ಎಕ್ಕಡ ಸರಿಮಾಡಿಟ್ಟಿರತೀನಿ," ಎಂದು ಪ್ರೋತ್ಸಾಹಿಸಿದ.

"ಬೇಡಪ್ಪ! ಯಾರ ಸಹವಾಸಾನೊ? ಏನೊ? ಜಾಗ್ರತೆ ಹೊಲಿ, ಹೊತ್ತಾಯಿತು."

"ಹೆಂಗಸರ ಸಹವಾಸಕ್ಕೇ ಹೆದರಿಕೊಂಡ್ರೇನ್ರೀ?" ನಗುತ್ತ ಗಿರಿ ಕೇಳಿದ.

"ನಿನ್ನ ಸಹವಾಸದಿಂದ ಆದ ಸುಖವೇ ಸಾಕು. ಸೀರೆ ತಾ."

ಪಿಳ್ಳೆ ಸೀರೆ ತೆಗೆದುಕೊಂಡ. ಹೆಂಗಸರು ನಕ್ಕು, ಹೊರಟರು. "ಏನೋ ವಯ್ಯ? ಮೂರು ಜೊತೆ ಹೊಲಿದಿವ್ನಿ ಎರಡಾಣೆ ಬ್ಯಾಡವಾ?" ಎಂದು ಕಿತ್ತಾಡಿದ ಮೋಚಿ.

ಗಿರಿ ಹೆಚ್ಚಿಗೆ ಕೊಡಲಿಲ್ಲ.

ಮೋಚಿ, "ಅಕಲಾಂಪುವಾಗಿ ದುಡೀತೀರಿ ಒಂದು ಚಣದಾಗೆ! ನಮಗೆ ಎಲ್ಡಾಣಿ ಹೆಚ್ಚು ಕೊಡಾಕಾಗಲ್ವ? ನಿಮ್ಮ ಬಾಳಿಗಿಷ್ಟು—!" ಎಂದು ಹಂಗಿಸುವುದನ್ನೂ ಗಮನಿಸದೆ ಗಿರಿಯೂ, ಹೆಂಗಸರೂ ಕೊಡವಿಕೊಂಡು ಹೋಗಿಯೇಬಿಟ್ಟರು.

"ಇವನ್ಯಾರು ನಿಮಗೆ ಗೊತ್ತೇನೊ ?" ಪಿಳ್ಳೆ ಕೇಳಿದ.

"ಇವನೆ ? ಏಜಂಟ್ ಸ್ವಾಮಿ ! ಆ ಹೆಂಗಸರಿಗೆ ಗಿರಾಕಿ ಹುಡುಕಿಕೊಡ್ತ ವನೆ. ನಿಮಗೂ ಹಾಕಿದ್ದ ಬಲೆ ! ಏನಾದ್ರೂ ಚೀಪ್‌ರೇಟ್ ಹಾಕಿಸುತ್ತಿದ್ದ ನೇನೊ ದೊಸ್ತಿ ಅಂತ ? ನೀವು ಮನಸ್ಸು ಹಾಕಲಿಲ್ಲ."

"ಥೂ ! ಏನು ಹಲ್ಕಮಾತು ನಿನ್ನದು !"

"ಇರೊ ವಿಚಾರ ಸ್ವಾಮಿ ! ದಿನಾ ಹೀಗೆ ಬರ್ತ್ತಾರೆ ಈ ಹೆಂಗಸರೂ ಇವನೂ ಸೇರಿ ಇಲ್ಲಿಗೆ—ಬಂದು ಹೋಗೋ ಜನಕ್ಕೆ, ಹೀಗೆ ತೋರಿಸಿಕೊಂಡು, ರಸ್ತೆ ಹತ್ತಿರ ನಿಂತು, ಪಾಪಾಸು ಸರಿಮಾಡ್ಕೊಳ್ಳೋ ನೆಪದಾಗೆ ಜನ ನೋಡ್ತಾರೆ ; ಗಾಳಾಹಾಕ್ತಾರೆ. ನಿಮ್ಮಂಥವರು ತಪ್ಪಿಸಿಕೋತೀರಿ. ಕೆಲವ್ರು ಅವ್ರೆ— ಎಂಜಲನ್ನ ಕಂಡಕೂಡ್ಲೆ ಹಾರಿಬಿಡೋ ನಾಯಿಗಳ ಹಾಗೆ ! ಅದೆಷ್ಟು ಹರಕು ಚಪ್ಪಲಿ ಮಡಗವರೊ ? ಅದೆಷ್ಟುಬೇಗ ಹರೀತಾರೊ ? ಅಥವಾ ದಿನಾ ಎಕ್ಕ ಡದಲ್ಲೆ ಹೊಡೆದಾಡಿ ಕಿತ್ತು ಹಾಕ್ತಾರೊ ? ಹಾ ! ಆಯಿತು ಸ್ವಾಮಿ, ತಗೀರಿ, ದುಡ್ಡು ಅವ್ರು ಕೊಟ್ಟಹಾಗೆ ಕೊಡಬೇಡಿ. ಸಂಜೆಹೊತ್ತು—ನಾನೂ ತಂಪು ಮಾಡಿಕೋತೀನಿ ಜೀವಕ್ಕೆ !"

# ಗುಂಡ ಸಂಪನ್ನ

ನಮ್ಮ ಗುಂಡ, ಗುಂಡೂ, ಗುಂಡಣ್ಣನ್ನ ಅರಿಯಿರಾ ನೀವು? ಗುಂಡ ಸಂಪನ್ನ ಅವನ ಸೋದರತ್ತೆ ಬದುಕಿದ್ದಾಗ ಹಾಗೆ ಹೇಳುತ್ತಿದ್ದಳು. ಅವನ ಮಾವ ಹಾಗೇ ನಂಬಿದ್ದ. ಗುಂಡ ಸಂಪನ್ನ ಅಂದ್ರೆ!

ಅವನನ್ನು ನೋಡದವರಿಗೆ ನಾನೀಗ ಅವನನ್ನು ತೋರಿಸಬೇಕಾಗಿದೆ. ಅವನು ಕಣ್ಣು ಮುಚ್ಚಿಕೊಂಡು ನಗುತ್ತಾನೆ. ಅದು ನಗುವುದಲ್ಲ. ಹಲ್ಲು ತೋರಿಸುವುದು. ಪಲ್ಲುಗಳೆಲ್ಲ ಹಸುರು ಬಣ್ಣ; ಒಡಸು ಸಂದಿಯಲ್ಲಿ ಮೆತ್ತಿದೆ; ಬಾಯಿನಾತ—ಅದೊಂದು ಗಂಧ. ಈಚೆಗೆ ಟೈ ಕಟ್ಟಲು ಕಲಿತಿದ್ದಾನೆ—ಅಂಗಡಿಗಳಲ್ಲಿ ಬಟ್ಟೆಯಿಂದ ಹೊಲಿದು ಇಟ್ಟಿರುತ್ತಾರಲ್ಲ ಅವು. ಟೈ ಗಂಟಿನ ಮೇಲೆ ಕಾಲರ್ ಗುಂಡಿ—ಅದು ತಗಡಿನ ಗುಂಡಿ—ಕಾಣಿಸುತ್ತದೆ. ಆಗಾಗ್ಗೆ ಟೈ ಮುಟ್ಟನೋಡಿಕೊಳ್ಳುತ್ತಾನೆ. ಟೈ ಕಟ್ಟತೊಡಗಿದಂದಿನಿಂದ ತಾನು ಫ್ಯಾರ್ಷ ಅಂತಸ್ತಿಗೆ ಏರಿದನೆಂದೂ ತನಗೆ ನಾಳೆ ದೊರೆಯುವ ಶಿರಸ್ತೆದಾರಿಗೆ ಅದು ಭೂಷಣವೇಷವೆಂದೂ ನಂಬಿದ್ದಾನೆ.

ನಿನ್ನೆ ತಿಮ್ಮಾಪುರದ ತಾಲ್ಲೂಕು ಕಛೇರಿಯಲ್ಲಿ ಗೊಲ್ಲರ್ ಕೆಲಸಕ್ಕೆ ಸೇರಿದ. ನಮ್ಮ ಗುಂಡ ಬಿ. ಎ. ಮಾಡಿದ್ದಾನೆ ಅಂದ್ರೆ! ಇವತ್ತು ನಗದಿ ಗುಮಾಸ್ತೆ; ನಾಳೆ ಬೆಳಿಗ್ಗೆ ಶಿರಸ್ತೆದಾರಿ; ಆಚೆ ನಾಡಿದ್ದು ಅಮಲ್‌ದಾರಿ; ಆ ಮೇಲೆ—ಉಳಿದದ್ದು.

"ಇವನ್ಯಾರು ನಿಮಗೆ ಗೊತ್ತೇನೊ ?" ಪಿಳ್ಳೆ ಕೇಳಿದ.

"ಇವನೆ ? ಏಜಂಟ್ ಸ್ವಾಮಿ ! ಆ ಹೆಂಗಸರಿಗೆ ಗಿರಾಕಿ ಹುಡುಕಿಕೊಡ್ತ ವನೆ. ನಿಮಗೂ ಹಾಕಿದ್ದ ಬಲೆ ! ಏನಾದ್ರೂ ಚೀಪ್‌ರೇಟ್ ಹಾಕಿಸುತ್ತಿದ್ದ ನೇನೊ ದೊಸ್ತಿ ಅಂತ ? ನೀವು ಮನಸ್ಸು ಹಾಕಲಿಲ್ಲ."

"ಥೂ ! ಏನು ಹಲ್ಕಮಾತು ನಿನ್ನದು !"

"ಇರೊ ವಿಚಾರ ಸ್ವಾಮಿ ! ದಿನಾ ಹೀಗೆ ಬರ್ತಾರೆ ಈ ಹೆಂಗಸರೂ ಇವನೂ ಸೇರಿ ಇಲ್ಲಿಗೆ—ಬಂದು ಹೋಗೋ ಜನಕ್ಕೆ, ಹೀಗೆ ತೋರಿಸಿಕೊಂಡು, ರಸ್ತೆ ಹತ್ತಿರ ನಿಂತು, ಪಾಪಾಸು ಸರಿಮಾಡ್ಕೊಳ್ಳೋ ನೆಪದಾಗೆ ಜನ ನೋಡ್ತಾರೆ ; ಗಾಳಾಹಾಕ್ತಾರೆ. ನಿಮ್ಮಂಥವರು ತಪ್ಪಿಸಿಕೋತೀರಿ. ಕೆಲವ್ರು ಅವ್ರೆ—ಎಂಜಲನ್ನ ಕಂಡಕೂಡ್ಲೆ ಹಾರಿಬಿಡೋ ನಾಯಿಗಳ ಹಾಗೆ ! ಅದೆಷ್ಟು ಹರಕು ಚಪ್ಪಲಿ ಮಡಗವರೊ ? ಅದೆಷ್ಟುಬೇಗ ಹರೀತಾರೊ ? ಅಥವಾ ದಿನಾ ಎಕ್ಕ ಡದಲ್ಲೆ ಹೊಡೆದಾಡಿ ಕಿತ್ತು ಹಾಕ್ತಾರೊ ? ಹಾ ! ಆಯಿತು ಸ್ವಾಮಿ, ತಗೀರಿ, ದುಡ್ಡು ಅವ್ರು ಕೊಟ್ಟಹಾಗೆ ಕೊಡಬೇಡಿ. ಸಂಜೆಹೊತ್ತು—ನಾನೂ ತಂಪು ಮಾಡಿಕೋತೀನಿ ಜೀವಕ್ಕೆ !"

# ಗುಂಡ ಸಂಪನ್ನ

ನಮ್ಮ ಗುಂಡ, ಗುಂಡೂ, ಗುಂಡಣ್ಣನ್ನ ಅರಿಯಿರಾ ನೀವು? ಗುಂಡ ಸಂಪನ್ನ ಅವನ ಸೋದರತ್ತೆ ಬದುಕಿದ್ದಾಗ ಹಾಗೆ ಹೇಳುತ್ತಿದ್ದಳು. ಅವನ ಮಾವ ಹಾಗೇ ನಂಬಿದ್ದ. ಗುಂಡ ಸಂಪನ್ನ ಅಂದ್ರೆ!

ಅವನನ್ನು ನೋಡದವರಿಗೆ ನಾನೀಗ ಅವನನ್ನು ತೋರಿಸಬೇಕಾಗಿದೆ. ಅವನು ಕಣ್ಣು ಮುಚ್ಚಿಕೊಂಡು ನಗುತ್ತಾನೆ. ಅದು ನಗುವುದಲ್ಲ. ಹಲ್ಲು ತೋರಿಸುವುದು. ಹಲ್ಲುಗಳೆಲ್ಲ ಹಸುರು ಬಣ್ಣ; ಒಡಸು ಸಂದಿಯಲ್ಲಿ ಮೆತ್ತಿದೆ; ಬಾಯಿನಾತ—ಅದೊಂದು ಗಂಧ. ಈಚೆಗೆ ಟೈ ಕಟ್ಟಲು ಕಲಿತಿದ್ದಾನೆ—ಅಂಗಡಿಗಳಲ್ಲಿ ಬಟ್ಟೆಯಿಂದ ಹೊಲಿದು ಇಟ್ಟಿರುತ್ತಾರಲ್ಲ ಅವು. ಟೈ ಗಂಟಿನ ಮೇಲೆ ಕಾಲರ್ ಗುಂಡಿ—ಅದು ತಗಡಿನ ಗುಂಡಿ—ಕಾಣಿಸುತ್ತದೆ. ಆಗಾಗ್ಗೆ ಟೈ ಮುಟ್ಟಿನೋಡಿಕೊಳ್ಳುತ್ತಾನೆ. ಟೈ ಕಟ್ಟತೊಡಗಿದಂದಿನಿಂದ ತಾನು ಫ್ಯಾರ್ಷ ಅಂತಸ್ತಿಗೆ ಏರಿದನೆಂದೂ ತನಗೆ ನಾಳೆ ದೊರೆಯುವ ಶಿರಸ್ತೆದಾರಿಗೆ ಅದು ಭೂಷಣವೇಷವೆಂದೂ ನಂಬಿದ್ದಾನೆ.

ನಿನ್ನೆ ತಿಮ್ಮಾಪುರದ ತಾಲ್ಲೂಕು ಕಛೇರಿಯಲ್ಲಿ ಗೊಲ್ಲರ್ ಕೆಲಸಕ್ಕೆ ಸೇರಿದ. ನಮ್ಮ ಗುಂಡ ಬಿ. ಎ. ಮಾಡಿದ್ದಾನೆ ಅಂದ್ರೆ! ಇವತ್ತು ನಗದಿ ಗುಮಾಸ್ತೆ; ನಾಳೆ ಬೆಳಿಗ್ಗೆ ಶಿರಸ್ತೆದಾರಿ; ಆಚೆ ನಾಡಿದ್ದು ಅಮಲ್‌ದಾರಿ; ಆ ಮೇಲೆ—ಉಳಿದದ್ದು.

ಅವರ ಮಾವ ಮೆಪರ್ಬಾನ್ ಕಮೀಷನರ್‌ರವರ ಹುಜೂರ್ ಆಫೀಸಿನಲ್ಲಿ ಚಿಕ್ಕ ಸಾಹೇಬರು. ಅವರೂ ಹಾಗೇ ಏರಿದವರು; ದಕ್ಷತೆ, ಸಾಹಸ, ಸಂಧಾನ ಇತ್ಯಾದಿ ಇತರರಿಗಿರದ ಗುಣಗಳಿಂದ ಮುಂದೆ ಬಂದವರು. ಮೇಲಿನಿಂದ ಕೆಳಗೆ, ಕೆಳಗಿನಿಂದ ಮೇಲೆ ತಮ್ಮ ಜನವೇ ಸಲೀಸಾಗಿ ಸಾಲು ಸಾಲಾಗಿ ಓಡಾಡುವಾಗ ನಮ್ಮ ಗುಂಡಣ್ಣನಿಗೆ ಕೆಲಸಕ್ಕೆ ಸೇರಿದ ನಾಲ್ಕು ವರ್ಷಕ್ಕೆ ಶಿರಸ್ತೆ ಪ್ರಾಪ್ತವಾಗುವುದು ಕಷ್ಟವೇ? ಆದರೂ ಅದೇ ತಾಲ್ಲೂಕು ಕಛೇರಿಯಲ್ಲಿ ಹಿಂದುಳಿದ ಪಂಗಡದ ಸಿದ್ದಯ್ಯನಿದ್ದಾನೆ. ಅವನಿಗೆ ಬಿಟ್ಟು ಇವನಿಗೆ ಹೇಗೆ? ಅವನು ಹಿಂದುಳಿದವನು; ಅವನು ಹಿಂದೇ ದಕ್ಷತೆ ಯೋಗ್ಯತೆಗಳಲ್ಲಿ! ನಮ್ಮ ಗುಂಡ ಮೇಲೇರುತ್ತಾನೆ.

ಈಗ ಗುಂಡಣ್ಣನಿಗೆ ಪ್ರಾಪ್ತವಾಗಿರುವ ಮಹಾ ಸನ್ನಿವೇಶ ಇದು; ಚಿಕ್ಕ ಸಾಹೇಬರು—ಅವರ ಸ್ವಂತ ಸೋದರಮಾವ ಅಂದ್ರೆ—ಅವರು ತಮ್ಮ ಕನ್ಯಾರತ್ನವನ್ನು ಇವರಿಗೆ ಕೊಟ್ಟು ತಮ್ಮ ವಂಶವನ್ನುದ್ಧರಿಸಿಕೊಳ್ಳಬೇಕು ಎಂದಿದ್ದಾರೆ. ಗುಂಡಣ್ಣನಿಗೆ ಕೈಗಡಿಯಾರ ಕೊಡಿಸಿದ್ದಾರೆ. ಆಗಾಗ್ಗೆ ಅದನ್ನು ನೋಡಿಕೊಂಡು, ಟೈ ಮುಟ್ಟಿಕೊಳ್ಳುತ್ತ, ತನ್ನ ಮಗ್ಗದ ಬಟ್ಟೆ ಷರಾಯಿ ಮಡಿಕೆ ಸರಿಮಾಡಿಕೊಂಡು ತಾನೊಬ್ಬ ವ್ಯಕ್ತಿ, ರಜದಮೇಲೆ ಬಂದಿರುವ ತಾಲ್ಲೂಕು ಕಛೇರಿಯ ಗುಮಾಸ್ತೆ ಎಂದು ತೋರಿಸಿಕೊಳ್ಳಲು, ಭಾವೀ ಸುಖ—ಪದವಿಗಳ ಹಗಲುಗನಸು ಪಡಿಯುತ್ತ ಸುಖಿಸಲು ಹೊರಟಿದ್ದಾನೆ. ಅದರಲ್ಲೂ ಎಲ್ಲಿಗೆ ಹೊರಟಿದ್ದಾನೆ? ಮೈಸೂರಿಗೆ! ಬೃಂದಾವನ ನೊಡಿ ಬರೋಣ ಎಂದು!

ಗುಂಡ ಮಧ್ಯಾಹ್ನ ಬಸ್ ಹತ್ತಿ ಹೋದ. ಎಲ್ಲೆಲ್ಲೊ ಸುತ್ತಿ ರಾಜಾಚಾರಿ ಹೋಟೆಲಿನಲ್ಲಿ ಕಾಸಿದೆಣ್ಣೆ ಚೌಚೌ ತಿಂದು ಬಿಸಿನೀರು ಕಾಫಿ ಕುಡಿದ. ಮತ್ತೊಂದು ಬಾರಿ ನೋಟ ನೋಡಲು ಹೊರಟ.

ಮೊದಲಲ್ಲಿ ಮಂಟಪದ ಕೆಳಗೆ ಬೀಳುವ ನೀರಿನ ಅಂಚಿನಲ್ಲಿ—ಹಾಲುಗಲ್ಲಿನ ಎರಡು ಪ್ರತಿಮೆಗಳಿವೆ; ರಾಧಾಕೃಷ್ಣರು ಒಬ್ಬರ ಹೆಗಲ ಮೇಲೊಬ್ಬರು

ಕೈಹಾಕಿಕೊಂಡು, ಕೊಳಲಗಾನದ ವೈಖರಿಯಲ್ಲಿ ತನ್ಮಯರಾದಂತೆ ಇದೆ, ಶಿಲ್ಪಿ ಕುಶಲ.

ಗುಂಡ ಬಹಳ ಉತ್ಸಾಹದಿಂದ ಇದ್ದ ಆ ದಿನ. ಈ ಗಂಡು ಹೆಣ್ಣು ಪ್ರತಿಮೆಗಳನ್ನು ನೋಡಿದ. ಅವನ ಮುದ್ದೆ ಮನಸ್ಸಿಗೂ ಏನೋ ಬೋಧೆ ಯಾಯಿತು. "ಹಾಳಾದವನು ಮಾವ, ಇನ್ನೂ ಯಾವಾಗ ಮದುವೆ ಮಾಡು ತ್ತಾನೊ ?" ಎಂದುಕೊಂಡ. ತನ್ನ 'ಆಕೆ'ಯನ್ನು ಕರೆತಂದು ಇಲ್ಲಿ ಹೀಗೆ ತಾನೂ ಅವಳೂ ಸೇರಿ....'ಮನವೆಂಬ ಮರ್ಕಟನ ತಡೆಯಲಾರೆನೊ ದೇವ !' ಎಂದು ದಾಸರೊಬ್ಬರು ಗೋಳಿಟ್ಟಿದ್ದಾರೆ. ಆ ಬಡಪ್ರಾಣಿ ಎಷ್ಟು ಕಷ್ಟ ಪಟ್ಟಿರಬೇಕು ಆ ಕೋತಿ ದೆಸೆಯಿಂದ !

ಆ ದಿನವೆಲ್ಲ ಗುಂಡನಿಗೆ ತಲೆಗುಂಗು ವಿಪರೀತ. ಏನೊ ಅನ್ನಿಸಿ ಹೋಗಿದೆ. ಪದವಿ ಕಾದಿದೆ. ಹೊನ್ನು ಹೊತ್ತ ಹೆಣ್ಣು ಬರುವವಳಿದ್ದಾಳೆ. ಲೋಕೋತ್ತರವಾದ ವಿಹಾರ ಸ್ಥಾನಕ್ಕೆ ಬಂದಿದ್ದಾನೆ. ಸ್ವಲ್ಪ ಷೋಕೀ ಮಾಡಬೇಡವೆ ? ಆ ದೀಪಗಳು, ಆ ಬಣ್ಣಗಳು, ಆ ಕುಣಿವ ಕಾರಂಜಿಗಳು ಸ್ವಚ್ಛಂದವಾಗಿ ಸುತ್ತುವ ಆ ನರನಾರಿಯರು—ತಲೆಗೆ ಏನೆನಿಸಲಿಕ್ಕಿಲ್ಲ ?

ಕಲ್ಲು ಬೆಂಚಿನಮೇಲೆ ಕೂತಿದ್ದಳು. ಯಾರು ? ಶ್ಯಾಮ ಸುಂದರಿ ಯೊಬ್ಬಳು.

"ನಾನಿಲ್ಲಿ ಕೂಡಬಹುದೆ ?" ನಮ್ಮ ಗುಂಡಣ್ಣ ಕೇಳಿದ. ಎಂತಹ ಸೌಜನ್ಯ ! ಮತ್ತು ಎಂತಹ ಧೈರ್ಯ !

"ಕೂಡಿ, ನನಗೇನು ?" ಬಿಳಿ ಹಲ್ಲು ಬೆಳಗಿದವು, ಕರಿ ಮುಖದಲ್ಲಿ.

"ಚೆನ್ನಾಗಿದೆ ಅಲ್ಲವೆ ?"

"ಬಹಳ ಚೆನ್ನಾಗಿದೆ. ನಿಮ್ಮದು ಯಾವ ಊರು ?"

"ಬೆಂಗಳೂರು ; ನಿಮ್ಮದು ?" ಎಂದು ಇವನ ಮರುಪ್ರಶ್ನೆ.

"ಮೆಡ್ರಾಸ್."

"ಕನ್ನಡ ಬರುತ್ತೆ ?"

"ಕೊಂಚ ಕೊಂಚ ತೆರಿಯೊಂ."

"ನೀವು ಇಲ್ಲೇ ಇದ್ದೀರೇನು ?"

"ಹೌದು"

"ಏನು ಮಾಡಿಕೊಂಡಿರೋದು ?"

"ನಮ್ಮ ಯಜಮಾನರು ಔವ್ರೆ."

"ಕಾಲುಂಗುರ ಹಾಕಿಲ್ಲ ?" ಕತ್ತಲಲ್ಲೂ ಅದು ಇಲ್ಲದುದ್ದುದು ಗುಂಡ ನಿಗೆ ಕಾಣಿಸಿತು.

"ಕಾಲುಂಗುರ ಹಾಕೋದು ಈಗಿನ ಫ್ಯಾಷನ್ ಅಲ್ಲ."

"ಕುಂಕುಮಾನೂ ಇಲ್ಲ ?"

"ಕುಂಕುಮ ಇಡದಿದ್ದರೂ ನಾನು ಅಂದವಾಗೆ ಕಾಣಿಸುತ್ತೀನಿ."

"ಹೌದು, ನಿಮ್ಮ ಹೆಸರು ?"

"ರೋಸ್‌ಮಣಿ,........ನನ್ನ ಹೆಸರು ಪೂರ್ತಿ ಕರೆದರೆ ಸರೋಜರಮಣಿ. ಆದರೆ ಪ್ರೀತಿಯ ಹೆಸರು ರೋಸ್‌ಮಣಿ."

"ಚೆನ್ನಾಗಿದೆ ಈ ಪ್ರೀತಿಯ ಹೆಸರು—ಬಹಳ ಫ್ಯಾಷನ್ ಹೆಸರು." ಸುಂದರಿ ನಕ್ಕಳು.

"ನಿಮ್ಮ ಹೆಸರು ?"

"ಗುಂಡಣ್ಣ."

"ಹೆಸರು ಚೆನ್ನಾಗಿಲ್ಲ. ಆದರೆ ನೀವು ಚೆನ್ನಾಗಿದ್ದೀರಿ." ಹೃದಯ ಹೇಗೆ ಪಟಪಟನೆ ಬಡಿದುಕೊಂಡಿತೊ ಈ ಮಾತುಗಳನ್ನು ಕೇಳುವಾಗ !

ರಸಿಕ ಗುಂಡ ಮಾರುತ್ತರ ಕೊಡುತ್ತಾನೆ—"ನಿಮ್ಮ ಹೆಸರು ಚೆನ್ನಾಗಿದೆ; ನೀವೂ ಚೆನ್ನಾಗಿದ್ದೀರಿ !" ಸುಂದರಿ ಹಿಗ್ಗಿದಳು ಸ್ವಲ್ಪಹೊತ್ತು ಮೌನವಾಗಿದ್ದರು. ಗುಂಡನಿಗೆ ಕೇಳಿದಳು : "ಒಬ್ಬರೆ ಬಂದಿದೀರಾ ?"

"ಹೌದು, ನೀನು ?"

"ನಾನೂ ಒಬ್ಬಳೆ !"

"ಒಬ್ಬಳೆ ! ನಿನಗೆ ಭಯ ಆಗೋಲ್ಲವೆ ?"

"ಗಂಡಸರಿರುವಾಗ ಭಯ ಆಗೋಲ್ಲ ನನಗೆ; ಟೈಂ ಎಷ್ಟು? ರೈಲಿಗೆ ಹೊತ್ತಾಗುತ್ತೆ."

"ಟೈಂ ಬೇಕಾದಷ್ಟಿದೆ. ಕೂತುಕೊ ಇನ್ನೂ ಸ್ವಲ್ಪಹೊತ್ತು," ಬಹಳ ಸಾಹಸಮಾಡಿ ಹೇಳಿದ.

ಕುಳಿತಳು.

"ಎಲ್ಲಿ ನಿಮ್ಮ ಗಡಿಯಾರ? ಕತ್ತಲೇಲಿ ಕಾಣಿಸೋದೆ ಇಲ್ಲ," ಎಂದು ರೋಸ್ ಆಗ ಕೈ ಹಿಡಿದು ಕೊಂಡಳು. ನೋಡಿ ಎಂಥ ಧೈರ್ಯಶಾಲಿ—ಗುಂಡ ನಿಗೆ ಹೆದರಿಕೆ ಆಗಲಿಲ್ಲ ಹಾಗೆ ಅವಳು ಕತ್ತಲಲ್ಲಿ ಕೈಹಿಡಿದಾಗ! ಕಟ್ಟಿದ್ದ ಗಡಿ ಯಾರ ಬಿಚ್ಚಿಕೊಂಡಳು.

"ನನ್ನ ಕೈಗೆ ಕಟ್ಟಿಕೊಳ್ಳಲಾ?"

ಹೆಣ್ಣೊಬ್ಬಳು ಅಂಗಲಾಚಿ ಹಾಗೆ ಕೇಳಿಕೊಳ್ಳುವಾಗ ಗುಂಡನಂಥ ರಸಿಕ ಬೇಡವೆಂದಾನೆ?

ಕೈಯಲ್ಲಿ ಕಟ್ಟಿಕೊಂಡು ಕೈ ತಿರುಗಿಸಿ ನೋಡಿದಳು: ಬಾಯಲ್ಲಿ ಬೆರಳು ಕಡಿಯುತ್ತ ನಕ್ಕಳು: ಕಣ್ಣು ಕತ್ತನ್ನೂ ಹೊರಳಿಸಿದಳು ರೋಸ್‌ಮಣಿ.

ನಾರೀ ಹೃದಯವನ್ನು ಹಿಂದೆ ಯಾರೂ ಗೆಲ್ಲಲಾಗಲಿಲ್ಲ. ಎಂಥೆಂಥ ವೀರಾದಿವೀರರೂ ಗೆಲ್ಲಲಾಗಲಿಲ್ಲ. ನಮ್ಮ ಗುಂಡಣ್ಣ ಕ್ಷಣಮಾತ್ರದಲ್ಲಿ ರೋಸ್‌ಮಣಿಯ ಹೃತ್ತಾಪಹಾರ ಮಾಡಿದನು. ಭಾಪು! ಗುಂಡೂ! ಧನ್ಯ, ನಿನ್ನನ್ನು ಪೆತ್ತ ಜನನೀಜನಕರುಗಳು!

ರೈಲನ್ನು ಸೇರುವಾಗ ಗುಂಡನಿಗೆ ಗಂಟಲು ಒಣಗಿ, ಕಾಲು ಸೋತು, ಸುಸ್ತಾಗಿತ್ತು. ರೋಸ್ ಕಳಿಸಲು ಬರಲಿಲ್ಲ. ಅವರಮ್ಮ ಅಲ್ಲಿಯೇ ಕೆಲಸ ಕ್ಕಿದ್ದಾಳಂತೆ—ಕೊನೆಯಲ್ಲಿ ಹೇಳಿದಳು ಅವಳು ಆ ಘಾಟಿ: ಹೊತ್ತಾಯಿ ತೆಂದು ಬೇಗ ಬೇಗ ಹೋಗಿ ಬಿಟ್ಟಿದ್ದಳು.

ಗುಂಡನು ಟಿಕೆಟ್ ತೆಗೆದುಕೊಳ್ಳಲು ಜೇಬಿಗೆ ಕೈ ಹಾಕಿದ. ಮನಿ ಪರ್ಸ್? ಮನಿಪರ್ಸ್? ಇಲ್ಲ. ಗಲಾಟೆಯಲ್ಲಿ—ಅಯ್ಯೋ—ಯಾರು ಹಾರಿಸಿ ಬಿಟ್ಟರೊ? ಏನು ಗತಿ? ಎಂದುಕೊಂಡ.

ಹೋಟೆಲಿನಲ್ಲಿ ತಿಂಡಿ ತಿಂದಾಗ ಅವನು ಕೊಟ್ಟ ಚಿಲ್ಲರೆಯನ್ನು ಅವಸರದಲ್ಲಿ ಪರ್ಸ್‌ನೊಳಕ್ಕೆ ಸೇರಿಸಲು ಮರೆತು ಕೆಳ ಜೇಬಿಗೆ ಹಾಕಿಕೊಂಡಿದ್ದ. ಹಣದ ಪರ್ಸ್ ಹುಡುಕಿದಾಗ ಈ ಚಿಲ್ಲರೆ ಆಣೆಗಳು ದೊರೆತವು. ಆತನಿಗೆ ಮೈಗೆ ಹೇಗೋ ಆಗಿತ್ತು. ತಲೆ ಕುಳಿತಲ್ಲೆ ಜೋಲುವುದು. ಸಾಹಸಮಾಡಿ ಟಿಕೆಟ್ ತಂದ. ಗಂಟೆ ನೋಡಲು ಕೈ ತಿರುಗಿಸುತ್ತಾನೆ. ಅದೇ ರೋಸ್ ಹಿಡಿದ ಕೈ. ಏನಿದೆ ಅಲ್ಲಿ? ಬರಿದು! ಗಡಿಯಾರ? ಅವಳ ಕೈಗೆ ಹಾಕಿಕೊಂಡಿದ್ದಳು.

"ಅದನ್ನೂ ಮರೆತೇ ಬಿಟ್ಟೆನಲ್ಲ? ಪರ್ಸ್‌ಕೂಡ ಅವಳೇ ಕೈ ಸೇರಿಸಿಕೊಂಡಳೊ?"

"ಓಡಿಹೋಗಿ ಬರಲೆ? ಎಲ್ಲಿ ಅವಳು?"

ಮೈಸೂರು ಸೇರಿದ.

ಸಾಹೇಬರು ಅಳಿಯನನ್ನು—ಅಳಿಯದೇವರಾಗುವವನನ್ನು ಹುಡುಕಿಕೊಂಡು ಬಂದರು. ತಿರುಗಿ ತಿರುಗಿ ಕೊನೆಗೆ ಪತ್ತೆಹಚ್ಚಿದರು—ಎಲ್ಲಿ? ಆಸ್ಪತ್ರೆಯ ಒಂಭತ್ತನೆಯ ವಾರ್ಡಿನಲ್ಲಿ.

ಪತ್ತೆ ಮಾಡಿದ್ದು ಅಷ್ಟೆ. ವಾಪಸು ಹೊರಟೇ ಬಿಟ್ಟರು. ರೈಲಿನಲ್ಲಿ ಕೂತಾಗ, "ಚಾಂಡಾಲ! ಇವನಿಗೇನು ಬಂದಿದ್ದೀತು ಹೊತ್ತು? ಮಗಳನ್ನೂ ಕೊಡಬೇಕೆಂದಿದ್ದೆ. ಇಂಥ ಕೆಲಸ ಮಾಡೋದೆ? ಹಾಳು ಸಹವಾಸ ಮಾಡಿ...." ಮುಂದೆ ಹೇಳಿ ಕೊಳ್ಳಲಾರದಾದ ಆ ಬಡಪ್ರಾಣಿ.

ಡಾಕ್ಟರುಗಳು ಬುದ್ಧಿವಾದ ಹೇಳಿ ಗುಂಡನನ್ನು ಬಿಡುಗಡೆ ಮಾಡಿ ಕಳಿಸಿದರು.

ಗುಂಡ ಈಗ ಯೋಚಿಸುತ್ತಾನೆ. ನಾಗರತ್ನ ರಾಮಸ್ವಾಮಿ ಮದುವೆಯಾದದ್ದನ್ನು. ಅದನ್ನು ಯೋಚಿಸುತ್ತಾನೆ–ಸಿದ್ದಯ್ಯನಿಗೆ ಶಿರಸ್ತೆ ದೊರೆತದ್ದು. ಆದರೆ ತನಗೆ ರೋಸ್‌ಮಣಿ ದೊರತದ್ದೂ, ಆಸ್ಪತ್ರೆ ವಾಸ ಲಭ್ಯವಾದದ್ದು ಯೋಚಿಸಿ ಕೊಳ್ಳಲಾರ; ಯೋಚಿಸದೆ ಇರಲಾರ.

ದೈವ ಎಷ್ಟರಲ್ಲಿ ಮೋಸಮಾಡಿತು?

ತಪ್ಪು ಗುಂಡನದೆ?

# ಮೋಡಿ ಆಟ

ದುರುಗ ಮುರಗಿಯವರು, ಗಾಳಿ ಮಾರಿಯವರು ಎಂಬುವರನ್ನು—ತಲೆಯ ಮೇಲೊಂದು ಬಣ್ಣ ಬಳಿದ ಕಪಾಟು ತರಹೆ ಪೆಟ್ಟಿಗೆಯಲ್ಲಿ, ಲೋಹದ ಒಂದು ಸ್ತ್ರೀಯನ್ನಿಟ್ಟು, ಅದಕ್ಕೆ ತಗಡುಗಳ ಒಡವೆ ತೊಡಿಸಿ, ಸೀರೆ ತುಂಡುಗಳನ್ನು ಸುತ್ತಿ ದುರ್ಗಮ್ಮ ಎಂದು ಊರುಗಳಲ್ಲಿ ಮೆರೆಸುವ ಗಂಡು ಹೆಣ್ಣುಗಳನ್ನು ನೋಡಿದ್ದೇವೆ. ಅವರ ಗಗ್ರ! ಗಗ್ರ! ಎಂಬ ಡೋಲಿನ ಶಬ್ದ ಮನಸ್ಸಿಗೆ ಅತಿ ಅಸಹ್ಯ. ಆ ಜನರ ಆವೇಶ, ಚಾಟಿಯಿಂದ ಮೈ ಹೊಡೆದುಕೊಂಡು ರಕ್ತ ಬರಿಸುವುದು, ತಲೆ ಕೂದಲು ಬಿಚ್ಚಿ ವಿಕಾರವಾಗಿ ಕೂಗುವುದು ಇನ್ನೂ ಅಸಹ್ಯ.

ಊರುಗಳ ಬೀದಿ ಮಧ್ಯ ಆತ ತನ್ನ ಪೆಟ್ಟಿಗೆ ಇಟ್ಟು, ಅವನ ಆ ಹೆಣ್ಣು ಡೋಲು ಟಕ ಟಕ ಮಾಡುತ್ತಿರಲು, ಒಂದು ಬಗೆಯ ತಾನದಿಂದ ಹೇಳುತ್ತ ಆ ವಿಗ್ರಹದ ಒಡವೆ ಬಿಚ್ಚಿ ಜನಕ್ಕೆ ತೋರಿಸುತ್ತಾನೆ. ಇಂತಿಂಥವರು ಈ ಒಡವೆ ಮಾಡಿಸಿ ಕೊಟ್ಟರು, ಎಂದು ಹಾಡುತ್ತಾನೆ.

ಸಿರಸಿ ಪ್ಯಾಟಿ ಸೆಟ್ಟ್ಯಾರು ।
ಬೆಳ್ಳಿ ಪಟ್ಟಿ ಕೊಟ್ಟ್ಯಾರು ॥ ಎಂಬ ಹಾಗೆ.
ಅವನ ವಿಕಾರ ಹೆಣ್ಣು ಇದರ ಗತ್ತಿಗನುಸಾರವಾಗಿ ಮೇಳಗೂಡಿಸಿ,
ಡೋಲನ್ನು ಟಕ್ಕ! ಟಕ್ಕ! ಎನ್ನಿಸುತ್ತ,

ಅವನು, '...... .... ...ಸೆಟ್ಟಾರು
........ಕೊಟ್ಟಾರು,' ಎಂದರೆ,

'ತಾನ ತಂದಾನ!' ಎಂದು ದನಿಗೂಡಿಸುತ್ತಾಳೆ. ಅದೊಂದು ಬಗೆಯ ಹಿನ್ನುಡಿಮಾತ್ರವೊ? ಅಥವ ತಾನೆ ತಂದಾನೆ; ಎಂಬ ನಿಜಾಂಶವೊ? ಬಹಳ ಮಾಡಿ ಕೊನೆಯದೆ ನಿಜವಿರಬೇಕು.

ಬಹಳ ವರ್ಷಗಳ ಎಂದರೆ ಸುಮಾರು ಕಾಲು ಶತಮಾನಗಳ ಹಿಂದಿನ ಮಾತು. ಆದರೆ ನೆನಪು ಮರೆತಿಲ್ಲ.

ಆ ದಿನ ಏತಕ್ಕೊ ಮಧ್ಯಾಹ್ನವೆ ನಮ್ಮ ಶಾಲೆಗೆ ರಜ ದೊರಕಿತು. ಹತ್ತಿರದ ಹಳ್ಳಿಯಲ್ಲಿ ಮೋಡಿ ಆಟ. ನಮ್ಮ ಸ್ಕೂಲಿನ ಆಚೆ ಬಯಲು. ಬಯಲ ಆಚೆ ಡೊಂಬರು, ಕೊರಚರು ಇತ್ಯಾದಿ ಕಸುಬಿನವರು ಠಾಣೆ ಹಾಕುವ ಸ್ಥಳ. ಅಲ್ಲಿಂದ ಹಾದು ನಾವಿಬ್ಬರು ಮೋಡಿ ನೋಡಲು ಹೊರಟೆವು. ನಾಲ್ಕಾರು ಜನ, ಒಬ್ಬಿಬ್ಬರು ಹೆಂಗಸರೂ ಸೇರಿ ಮಣ್ಣಿನ ಕೊಡಗಳ ತುಂಬ ಈಚಲು ಹೆಂಡ ಹೊತ್ತುಕೊಂಡು ಮುಂದೆ ಸಾಗಿದ್ದರು.

ನಮ್ಮಿಬ್ಬರಿಗೂ ಇದ್ದುದು ಮೋಡಿ ಆಟದ ಕುತೂಹಲ. ನೋಡಿಕೊಂಡು ಸಂಜೆ ಮನೆಗೆ ಬಂದರೆ, ಬೀಳುವ ಲತ್ತಾ ಪ್ರಹಾರಗಳನ್ನು ಹೇಗೆ ತಪ್ಪಿಸಿಕೊಳ್ಳಬೇಕೆಂಬ ಮತ್ತೊಂದು ಕುತೂಹಲ.

ಆ ಹಳ್ಳಿ ಸೇರಿದೆವು. ಮಧ್ಯೆ ರಸ್ತೆಯಲ್ಲಿ ಚಪ್ಪರ ಹಾಕಿ ಒಳಗಡೆ ಮಂತ್ರವಾದಿ ಕೂತಿದ್ದಾನೆ ಬರೀ ಮೈಯಲ್ಲಿ. ಆತ ನಮ್ಮೂರ ಸಂತೆಯಲ್ಲಿ ಬಳೆ ಮಾರುವ ಬುಡನ್‌ಮಿಯ. ಅವನ ಮುಂದೆ ಕೊಂಚ ಬಲಭಾಗದಲ್ಲಿ ಒಂದು ಹಸಿ ಮಣ್ಣಿನ ಬೊಂಬೆ. ಅದಕ್ಕೆಲ್ಲ ಕುಂಕುಮ ಬಳಿದು ಕೆಂಪು ಹೂವು ಮುಡಿಸಿದೆ. ಅವನ ಹಿಂದೆ ಅವನ ಬೆಂಬಲಕ್ಕೆ ನಮ್ಮೂರ ಕಂತಿಮಠದ—ಅಯ್ಯನವರು. ಮಧ್ಯದಲ್ಲಿ ಬಯಲು ಬಿಟ್ಟು ಎಡ ಬಲಗಳಲ್ಲಿ ಸಾಲುಗೊಂಡು ಹೆಣ್ಣು ಗಂಡು ನೆರದಿದೆ.

ಜನ ಕುತೂಹಲದಿಂದಿದ್ದಾರೆ. ಹಳ್ಳಿಗಳಲ್ಲಿ ಆಟ, 'ಪರ್ಸಂಗ' ಇವೆಲ್ಲ ಕೂಡಲೆ ಆರಂಭವಾಗುವುದಿಲ್ಲ. ಜನ ಬಂದು ಕೂಡಿ, ಮೇಳಯಿಸ್ಸಿ,

ಕೋಟೆಯ ಲಗ್ಗೆಯಾದಂತೆ ಆಗ ಗಿಜಿ ಗಿಜಿ ಯಾಗಿ, ಜನ ಮಿಕಿ ಮಿಕಿ ಕಣ್ಣು ಬಿಟ್ಟು, ಬೀಡಿ ಸೇದಿ, ಅಗಿದ ತಂಬುಲ ಉಗುಳಿ, ಅಲ್ಲಲ್ಲಿ ಮಾತು ಮಾತಿಗೆ ಮಾತು ಆಗಿ, ಕೈ ಕೈ ಮಿಲಾಯಿಸಿ, ಕೊನೆಗೆ ಯಾವನಿಂದಲೊ ಗಟ್ಟಿಯಾಗಿ ದುರ್ಭಾಷೆಗಳಿಂದ ಬೈಸಿಕೊಂಡಮೇಲೆ ಜನ ಗಲಭೆ ಬಿಟ್ಟು ಸುಮ್ಮನಾದಾರು. ನೆರೆದ ಹೆಣ್ಣುಗಳನ್ನು ನೋಡುತ್ತ, ಕುಚೋದ್ಯ ಮಾಡುತ್ತ ಮುಂದೆ ಬರುವ ಮಹಾ ನೋಟಕ್ಕೆ ಕಾದಾರು.

ಹಾಗೆ ಜನ ಕಾದಿತ್ತು. "ಮೋಡಿ ಅಂದ್ರೆ ಛೆ! ಇನ್ಯಾಕ ಗಾಳಿ ವೀರಪ್ಪನ್ನ ಬಿಟ್ಟ ಮ್ಯಾಲೆ!" ಎನ್ನಬೇಕು ಒಬ್ಬ. "ತಗೀ ನಿನ! ಏನ ಹಚ್ಚೀದಿ ಅವಂದು! ನಾನೋಡಿದ ಮೋಡಿ ಅಂದ್ರ—ನೋಡು ತಿಮ್ಮಾ, ಚಂದೂ ಕನ್ಯಾಗ ಒಂದು ದಮ್ಡೀ ಹಾಕಿ, ಬಾರ್‌ಮಾಡಿ ಹೊಡದ್ರೆ ಅದೆಲ್ಲಿ ಹೋತು ಯಾರ ಹೇಳವ್ರು? ನೋಡು, ಮೋಡಿ ಆಟದವರು ಅದನ್ನ ಪತ್ತೆ ಹಚ್ಚಿದ್ರು. ಎಲ್ಲಿ ಅಂತೀಯ? ಬಣಗಾರ ಹಿತ್ತಲು ಭಾವ್ಯಾಗ; ಒಂದು ಕಪ್ಪೆ ನುಂಗಿತ್ತು. ಆ ಕಪ್ಪೆ ಹಿಡಕೊಂಡು ಬಂದು, ಅದರ ಹೊಟ್ಟೆ ಕೊಯ್ದು ತಗದ್ರೆ ಅದರಾಗ ಇತ್ತು ಆ ದಮ್ಡಿ! ಅದು ಮೋಡಿ ಆಟದ ಮಹತ್ವಾ."

ಇವನ್ನೆಲ್ಲ ಕೇಳಿಸಿಕೊಂಡೆ. ಮೋಡಿಯ ಅಪಾರ ಕೌತುಕ, ನಿಗೂಢ ಗೂಢಾಂಶ ಇನ್ನೂ ಅಪಾರವಾಯಿತು.

ಆ ಮಣ್ಣಿನ ಬೊಂಬೆಯಲ್ಲಿ ಮೋಡಿಯ ಪಂದ್ಯದ ಹಣವನ್ನೊ ಚಿನ್ನವನ್ನೊ ಇಟ್ಟಿರುತ್ತಾರಂತೆ. ಅದನ್ನು ಹೊಂದಲು ಬರಬೇಕಾದರೆ ಅನೇಕ ಆವರಣಗಳನ್ನು—ಮೋಡಿ ಮಂತ್ರದಿಂದ ರಕ್ಷಿತವಾದ ಅನೇಕ ಆವರಣಗಳನ್ನು ದಾಟಿ ಬರಬೇಕು. ಮೊದಲ ಆವರಣದಲ್ಲೆ ಅದನ್ನು ದಾಟಲು ಸಾಧ್ಯವಾಗದೆ ರಕ್ತ ಕಾರಿ ಸತ್ತವರೆಷ್ಟೊ ಅಂತೆ. ಯುದ್ಧದಲ್ಲಿ ಒಂದು ಕೋಟೆಗೊ ಅಥವಾ ಒಂದು ಆಶ್ರಯಕ್ಕೊ ಅನೇಕ ಶ್ರೇಣೀ ರಕ್ಷಣಾ ನೆಲೆಗಳು (ಲೈನ್ಸ್ ಆಫ್ ಡಿಫೆನ್‌ಸಸ್) ಇರುವ ಹಾಗೆ ಈ ಮೋಡಿಯಲ್ಲಿ ಬೊಂಬೆಯ ಆಚೆ ಅನೇಕ ಕಟ್ಟುಗಳನ್ನು ಹಾಕಿರುತ್ತಾರಂತೆ. ಈ ಕಟ್ಟುಗಳನ್ನು ಮಂತ್ರಶಕ್ತಿಯಿಂದ ಮುರಿದು, ಒಳಕ್ಕೆ ಬಂದು ಆ ಮಣ್ಣಿನ ಬೊಂಬೆ ಹೊಂದಬೇಕು. ಮಂತ್ರ

ಮಾಟ, ಪ್ರತಿಮಂತ್ರ ಇವು ಸತತವಾಗಿ ನಡೆದೇ ಇರುತ್ತವೆ. ಮಂತ್ರವಾದಿಯೇ ರಕ್ತಕಾರಿ ಸಾಯುತ್ತಾನೆ, ಇಲ್ಲವೆ ಮೋಡಿಯವರೆ ಉರುಳುತ್ತಾರೆ. ಸಮ ರಾಜಿ ಆದರೂ ಆಗಬಹುದು ಇಬ್ಬರ ಮಂತ್ರಶಕ್ತಿಯೂ ಸಮವಾಗಿದ್ದರೆ.

ಜನ ಕೂಗ ತೊಡಗಿದರು, ಕೇಕೆ ಹಾಕಿದರು. ಆ ಮೋಡಿ ಜನ ಪೈಶಾಚೀಭಾಷೆಯಲ್ಲಿ ಮಂತ್ರೋಚ್ಚಾರಣೆ ಮಾಡುತ್ತ, ಕಾಲಿಗೆ ಹಾಕಿದ ಗಗ್ಗರಿಗಳನ್ನು ಗರ್ ! ಗರ್ ! ತಿರುಗಿಸಿ ಶಬ್ದ ಮಾಡುತ್ತ, ಓಹೋ ! ಲುಫೇ! ಹೀಗೆಲ್ಲ ಅಬ್ಬರಿಸುತ್ತ ಮಂತ್ರದ ಕಾಳಗಕ್ಕೆ ಸಿದ್ಧರಾದರು. ನಾಲ್ಕಾರು ಜನ ಆ ಮೋಡಿಯ ಗಂಡಸರು ಅಲ್ಲಿ ಗಡಿಗೆ ಮಡಕೆಗಳಲ್ಲಿ ತುಂಬಿದ್ದ ಹೆಂಡವನ್ನು ಮಡಕೆ ಸಹಿತ ಎತ್ತಿ ಬಾಯಿಗೆ ಬಗ್ಗಿಸಿಕೊಂಡು, ಬಾಯಲ್ಲಿ ಆ ಹೊಲಸು ಹನಿ ಸೋರುತ್ತಿದ್ದಹಾಗೆಯೇ ತಲೆ ಕೆದರಿಕೊಂಡು, ಆವೇಶ ತುಂಬಿಕೊಂಡು ಮುನ್ನುಗ್ಗುತ್ತಿದ್ದರು.

ನಾವಲ್ಲಿಗೆ ಬರುವಾಗ ಹೆಂಡ ಹೊತ್ತುಕೊಂಡು ಮುಂದೆ ಸಾಗಿದ್ದವರೆ ಆ ಮೋಡಿ ವೀರರು.

ಹೋ ! ಎಂದು ಅಬ್ಬರಿಸಿ, ತಲೆ ಕೊಡವಿ, ಕೈ ಬೀಸಿ, ಕಾಲ ಗಗ್ಗರಿ ತಿರುಗಿಸುತ್ತ ಮುಂದುವರಿಯಲು ನುಗ್ಗಿದರೆ, ಕಾಲೇ ಮುಂದೆ ಸಾಗವು. ಎದೆ ಚಾಚಿದಷ್ಟೂ ದೆಹ ಹಿಂದಕ್ಕೇ ನೂಕಿ ಸರಿಯುತ್ತದೆ. ಅತ್ತ ಚಪ್ಪರದಲ್ಲಿ ಇವರಿಗೆದುರಾಗಿ ಕುಳಿತ ಬಳೆಗಾರ ಬುಡನ್‌ಮಿಯ ಕಾಳು ಮಂತ್ರಿಸಿ ಎರಚು ತ್ತಲೆ ಇದ್ದಾನೆ. ಸಾಗಲಿಲ್ಲ ಮೋಡಿಯವರದು, ಏನೂ ಸಾಗಲಿಲ್ಲ.

ಅವರಲ್ಲಿ ಒಬ್ಬಳು ಮುದುಕಿ ಕಾಲ ಗಗ್ಗರಿ ಗರ್ ! ಗರ್! ಮಾಡಿ ಕೊಂಡು ಏನೇನೋ ಪೈಶಾಚೀಭಾಷೆಯಲ್ಲಿ ಒದರುತ್ತ ಇವರ ತಲೆಯ ಮೇಲೆ ಬೇವಿನ ಕಡ್ಡಿ ಸೊಪ್ಪನ್ನು ಅಭಿಮಂತ್ರಿಸುತ್ತ ಪ್ರೋತ್ಸಾಹಿಸಿದಳು.

ಆ ಹೆಂಡದ ಅದ್ವಿತೀಯ ಶಕ್ತಿಯೊ, ಅವರ ಮಂತ್ರದ ದಿವ್ಯ ಪ್ರಭಾವ ವೋ, ಅವಳ ಬೇವಿನ ಸೊಪ್ಪಿನ ಪ್ರೋಕ್ಷಣೆಯ ಮಾಟವೊ, ಏನೊ ಅಂತೂ ಇವರಿಗೆ ಶಕ್ತಿಬಂದು ಹುರ್ ! ಎಂದು ಮುಂದೆ ನುಗ್ಗಿದರು ಈ ಮೋಡಿಯ ವರು. ಏನೊ ಬಿರುಗಾಳಿ ಬಂದಂತೆ ಆಯಿತು. ಹೋ ! ಹೋ ! ಹೋ !

ಜನ ಕೂಗಿದರು. ಒಂದೇ ಬಾರಿಗೆ ಲಗ್ಗೆಹತ್ತಿ ಕೋಟೆ ವಶವಾಯಿತೇನೊ ಎಂದು ತೋರಿತು.

ಗಲಾಟೆ, ಗಜಿಬಿಜಿ, ಕಳವಳದ ಸಂತೆ ಕೊಂಚ ತಿಳಿಯಾದಾಗ ನೋಡಿದರೆ ಒಬ್ಬ ಚಿಕ್ಕ ಹುಡುಗ, ೧೬-೧೭ರ ವಯಸ್ಸಿನವನು, ಒಬ್ಬನೆ ತೂರಾಡುತ್ತ ಮುಂದೆ ಸಾಗಿದ್ದ. ಉಳಿದವರೆಲ್ಲ, ಇಷ್ಟು ಅಬ್ಬರಪೆದ್ದಿದ್ದರೂ, ಗಡಿಗೆಗಟ್ಟಲೆ ಹೆಂಡ ಮುಗಿದಿದ್ದರೂ ಹಿಂದೆ ಬಿದ್ದರು. ಆತ ಮಾತ್ರ ತೂರಾಡಿಕೊಂಡು ಮುಂದೆ ಸಾಗಿದ್ದ. ಆಗಿನ ಸನ್ನಿವೇಶ ಹೇಗಿತ್ತೆಂದರೆ ಚಕ್ರವ್ಯೂಹವನ್ನು ಭೇದಿಸಿಕೊಂಡು ಬರುವೆನೆಂದು ಏಕಾಂಗಿಯಾಗಿ ಹೋದ ಬಾಲವೀರ ಅಭಿಮನ್ಯುವನ್ನು ನೆನಪಿಗೆ ತರುವಂತಿತ್ತು.

ಎಲ್ಲ ಪಾಂಡವ ವೀರರೂ ಹಿಂದೆ ಬಿದ್ದಾಗ, ಅವನೊಬ್ಬನೆ ಏಕಾಂಗವೀರ, ಅಸಹಾಯಿಯಾಗಿ, ಅತುಲ ಪರಾಕ್ರಮವನ್ನು ಪ್ರಕಟಮಾಡಿದವನಾದನು. ಅಭಿಮನ್ಯು ಪದ್ಮವ್ಯೂಹ ಭೇದಿಸುವಲ್ಲಿ ಬಿದ್ದ. ಈ ಡೊಂಬರ ಹುಡುಗ ಕೈಕಾಲು ಆಯ ತಪ್ಪಿ ಇನ್ನೂ ಮೋಡಿಯ ಬೊಂಬೆ ಬಲು ದೂರ ಇರುವಲ್ಲೆ ಬಿದ್ದ. ಇವರು ಆತನನ್ನು ಹೊತ್ತುಕೊಂಡು ಹೋದರು.

ಬುಡನ್‌ಮಿಯ, ಇನ್ನು ನಿಧಾನಿಸಿದರೆ ಕೆಲಸ ಕೆಟ್ಟೀತೆಂದು ಬಗೆದು ಹತ್ತಿರದಲ್ಲೆ ಹೂತಿದ್ದ ಒನಕೆಗೆ ತಾನು ಹೊದೆದುಕೊಂಡಿದ್ದ ಸಂಚಿಯನ್ನೆ ಬಿಚ್ಚಿ, ಚಾವಟಿಯ ಹಾಗೆ ಮುರಿಸುತ್ತಿ, ಬಾರಿಸ ತೊಡಗಲು ಈ ಮೋಡಿಯ ದೆವ್ವಗಳು—ಹೆಣ್ಣು ಗಂಡುಗಳೂ ಎಲ್ಲ ಉರುಳಿ, ಚಾವಟಿ ಏಟು ತಾಳಲಾರದೆ ಅಯ್ಯೊ ! ಅಯ್ಯೊ ! ಹಾ ! ಎಂದು ಕಿರಿಚುತ್ತ ಹೊರಳಾಡಿದವು.

ಮುಂದೆ ನುಗ್ಗಿದವರು ಹಿಂದೆ ಬಂದರು. ತಮ್ಮ ರಕ್ಷಣಾ ನೆಲೆಗೆ ಬಂದು ನಿಂತರು. ಇಲ್ಲಿ ಇವರ ಮಂತ್ರೋಚ್ಚಾರಣೆ, ಉಗ್ಗಡಣೆ ನಡೆಯಿತು. ಗಗ್ಗರಿ ತಿರುವಿ, ಹೋ ! ಎಂದು ಅಬ್ಬರಿಸಿ, ಮಡಕೆ ಖಾಲಿಮಾಡಿ, ತಲೆಯ ಮೇಲೆ ಬೇವಿನಸೊಪ್ಪು ಸೊಂಕಿಸಿಕೊಂಡು ನುಗ್ಗಿದರು. ಹೇಗೆಂದರೆ—ಯುದ್ಧ ಮಾಡುವ ಸೈನ್ಯ ಆಕ್ರಮಣ ಮಾಡಲು ವ್ಯೂಹ ರಚಿಸಿ ಒಕ್ಕಟ್ಟಾಗಿ ಮುಂದೆ ಸಾಗುವಂತೆ, ಕೈ ಚಾಚಿ, ಬಾಯಿ ಒದರಿ, ತಲೆ ಕೊಡವಿ, ಹೋ ! ಎಂದು

ಅಬ್ಬರಿಸಿ ನುಗ್ಗಿದ ಆ ಕ್ರಮಕ್ಕೆ, ಮಂತ್ರಗಳ ಪ್ರಬಲ ಶಕ್ತಿಗೆ, ಕೋಟೆ ಕಾಯುತ್ತ ಕುಳಿತ ಬುಡ್ಡ ಒಂದೇ ಬಾರಿಗೆ ಎದ್ದು ಓಡಿದ. ಗದ್ದಲವಾಯಿತು. ಜನ ಹೋ! ಹೋ! ಎಂದು ಕೂಗಿಕೊಂಡರು. ಅಯ್ಯನವರು ಓಡಿ ಹೋಗಿ ಆತನನ್ನು ಹಿಡಿದು ತಂದು ಧೈರ್ಯ ಹೇಳಿ ಕುಳ್ಳಿರಿಸಿದರು.

ಮತ್ತೆ ಬಂದು ಆತ ತನ್ನ ಸ್ಥಾನದಲ್ಲಿ ಕುಳಿತ. ಆತ ಬೆದರಿದವನಂತೆಯೇ ಇತ್ತು. ನೋಡಿ ಆಟ ನಡೆಯುವಾಗ ಒಬ್ಬ ಮುದುಕಿ—ಹೆಂಗಸು ಗಗ್ಗರಿ ತಿರುಗಿಸುತ್ತ ಬರುತ್ತಿದ್ದಳಷ್ಟೆ ಇವರಿಗೆ ಬೆಂಬಲವಾಗಿ. ಮಂತ್ರವಾದಿ, "ಈ ಹೆಂಗಸು ಬರಕೂಡದು; ನೋಡಿಯವರಿಗೆ ಒತ್ತಾಸೆ ಮಾಡಕೂಡದು," ಎಂದು ಕರಾರು ಮಾಡಿದ. ಉಪಾಯವಿಲ್ಲದೆ ಆ ಶಾಕಿನಿ ಹಿಂದೆಯೇ ನಿಂತು. ಅಲ್ಲಿಂದಲೆ ತನ್ನ ಶಕ್ತಿಯನ್ನು ಮಾತ್ರ ಇವರೊಂದಿಗೆ ಒತ್ತಾಸೆಗೆ ಕಳಿಸು ವಂತಾಯಿತು.

ಒಬ್ಬ ಸಾಹಸಿ ಅತಿಶ್ರಮದಿಂದ, ಇನ್ನೇನು ಹತ್ತಿರ ಎಂದರೆ ಹತ್ತು ಗಜ ಸಮೀಪಕ್ಕೆ ಹೋಗಿಯೇ ಬಿಟ್ಟ ಎನ್ನುವಾಗ, ಬುಡನ್‌ಸಾಬಿ, ಕೈಯಲ್ಲೆ ಇಟ್ಟುಕೊಂಡು ಉಗುರಿನಿಂದ ಜಿಗುಟುತ್ತಿದ್ದ ನಿಂಬೆಹಣ್ಣನ್ನು ಇವನ ಕಡೆ ಎಸೆದೇ ಬಿಟ್ಟ. ಆಗ, ನೋಡಿ, ಏನಾಯಿತೊ? ಆ ಆಟದವನು ಬುಡ ಕಡಿದ ಮರದಂತೆ ಧೊಪ್ಪನೆ ಬೀಳಬೇಕೆ? ಬಾಯಿಂದ ನೊರೆ ಹರಿಯುತ್ತಿತ್ತು. ತಲೆ ಎತ್ತಿ ನಿಂತುಕೊಳ್ಳಲಾರದು. ಏಳಲು ಯತ್ನಿಸಿದ. ಏನೂ ಆಗಲಿಲ್ಲ. ಮೈ ಮೇಲೆ ಮಣಗಟ್ಟಲೆ ಸೀಸ ಹೇರಿದಂತಾಗಿತ್ತು. ಅವನನ್ನು ಹಿಂದಕ್ಕೆ ಹೊತ್ತು ಕೊಂಡು ಹೋದರು. ಇದೊಂದು ಕೇವಲ ಯುದ್ಧ, ಮಹಾಭಾರತ, ಇಲ್ಲಿ ಯಡ್ ಇವುಗಳಲ್ಲಿ ವರ್ಣಿತವಾದ ಯುದ್ಧದಂತೆ. ಅತಿ ಸಾಹಸದಿಂದ ವೀರರು ಮುನ್ನುಗ್ಗುತ್ತಾರೆ; ಅನೇಕ ವೇಳೆ ಏಕಾಂಗರಾಗಿಯೆ ನುಗ್ಗುತ್ತಾರೆ. ಆದರೆ ಶತ್ರುಗಳ ಪ್ರತಿಹತಿಗೆ ಸೋತು ಹಿಮ್ಮೆಟ್ಟುತ್ತಾರೆ.

ಮತ್ತೊಂದು ಬಾರಿ ಮೇಳೈಸಿ ಈ ಆರೇಳು ಜನ ನುಗ್ಗಿದರು. ಆಗಲೆ ಎರಡು ಗೆರೆಗಳು ಇವರ ವಶವಾಗಿದ್ದವು. ಇವರ ಆಕ್ರಮಣಸ್ಥಾನ ಮುಂದು ವರಿದಿತ್ತು. ಯಥಾಪ್ರಕಾರ ಆಕ್ರಮಣ ವಿಧಾನ. ಆದರೆ ಈ ಬಾರಿ ಮಂತ್ರದ

ತೀವ್ರತೆ ಅತಿ ಹೆಚ್ಚಾಗಿದ್ದಿರಬೇಕು. ಕುಳಿತಲ್ಲಿಂದಲೆ ಬುಡನ್‌ಮಿಯ ಮಾಡುವ ಚೇಷ್ಟೆಗಳನ್ನು ಎಷ್ಟು ಕಾಲ ಸಹಿಸಬೇಕು ? ಅವನಿಗೆ ತಕ್ಕುದನ್ನು ಮಾಡಲೇ ಬೇಕು. ಸರಿ, ಒಂದೊಂದು ಹೆಜ್ಜೆಯನ್ನು ಒತ್ತಿ ನೆಲದಮೇಲೆ ಇಕ್ಕುತ್ತ, ಕಾಲ ಗಗ್ಗರಿ ಗರ್ ! ಗರ್ ! ಎಂದು ಶಬ್ದ ಮಾಡುವಾಗ, ಬಾಯಿಯಿಂದ ಏನೇನೊ ಬರುತ್ತಿರುವಾಗ, ಕೈ, ಕತ್ತು, ನೋಟ ಎಲ್ಲ ಮುಂದಿನ ಶತ್ರುವನ್ನೆ ತೋರಿಸುತ್ತಿರುವಾಗ, ಆತನ ಮೇಲೆ ತಮ್ಮ ಮಂತ್ರಶಕ್ತಿಯನ್ನು ನೂಕುತ್ತ ನುಗ್ಗಿದರು. ಬುಡನ್‌ಮಿಯ ಹೊರಳಿಬಿದ್ದನು. ಬಾಯಿಯಿಂದ ರಕ್ತ ಕಾರಿದ ನಂತೆ. ಜನಸಂದಣಿ ಅಪಾರವಾಗಿ ಮುತ್ತಲು, ಚಿಕ್ಕವನಾದ ನನಗೆ ಬುಡನ್ ಸಾಬಿಗಾದ ಗತಿ ಕಾಣಿಸಲಿಲ್ಲ.

ಆದರೆ ಈ ಮೋಡಿಯಾಡುವಾಗ, ಯಾವನಾದರೂ ಎದುರಾಳಿಗೆ ಒಂದು ಸ್ಥಾನದಲ್ಲಿ ತಡೆಯೋ, ಕೇಡೋ ಆದರೆ ಮಂತ್ರವಾದಿ, ಅಷ್ಟಕ್ಕೆ ತಡೆಯು ತ್ತಾನೆ. ಆತ ಹಿಮೆಟ್ಟಬಹುದು ಬೆಂಬಲದವರು ಆತನನ್ನು ಸಾಗಿಸಿಕೊಂಡು ಹೋಗಬಹುದು. ಆತ ಸುಧಾರಿಸಿಕೊಂಡು ಮತ್ತೆ ಹಿಂತಿರುಗುತ್ತಾನೆ.

ಮೋಡಿಯವರೂ ನಿಂತರು, ತಡೆದರು. ಬುಡನ್‌ಮಿಯ ಹೊರಳಾಡ ತೊಡಗಿದನು. ಜನ ಮುತ್ತಿದರು. ಅಯ್ಯನವರು ಗದ್ದಲ ಮಾಡಿದರು, ಆಕ್ರೋಶ ಮಾಡಿದರು

ನಮ್ಮೂರಿನ ಕೆಲವರು ತರುಣರೂ ಮೋಡಿಯಾಟ ನೋಡಲು ಬಂದ ವರು, ಅವರೂ ಯಥಾಶಕ್ತಿ ತಮ್ಮ ಪ್ರಭಾವವನ್ನು ಬೀರುತ್ತ ತಮ್ಮ ಇರ ವನ್ನೂ ಜನಕ್ಕೆ ಗೊತ್ತಾಗುವಂತೆ ಮಾಡಿದ್ದರು. ಆ ಪ್ರಚಂಡರ ಗಲಾಟೆ ಬಹಳ. ಏತಕ್ಕೊ ಸಂಜ್ಞೆ. ಸರಿ, ಆರಂಭವಾಯಿತು ಅವರ ಆಕ್ರಮಣ.

ಇದು ತನಕ ಮೋಡಿ ಮಾಡುವವರು ಮಾತ್ರವೆ ಪೆಟ್ಟು—ನೋವು ಅನುಭವಿಸುತ್ತಿದ್ದವರು. ನೆರದ ಸಭಾ ಮಂಡಲಿ ಈ ವಿನೋದ ನೋಡು ತ್ತಿತ್ತು. ನೆರೆದ ಸಭಾ ಮಂಡಲಿಯ ಆನಂದಕ್ಕಾಗಿಯೆ ಈ ಆಟ. ಆದರೆ ಸಭಾ ಮಂಡಲಿಗೂ ಈಗ ಈ ಮೋಡಿಯಾಟದಲ್ಲಿ ಭಾಗವಹಿಸುವ ಅವಕಾಶ ಒದಗಿತು.

ಆ ಹುಡುಗರ ಕೈಯಲ್ಲಿ ಕಟ್ಟಿದ್ದ ಕಾಗದದ ಪೊಟ್ಟಣಗಳಿದ್ದವು. ಬುಡಸ್ ಉರುಳಿದ ಕೋಲಾಹಲದಲ್ಲಿ ಜನ ಎತ್ತೆತ್ತಲೊ ತಿರುಗಿದ್ದಾಗ ನೋಡುತ್ತಿದ್ದ ಇವರು ಮುಂದುವರಿದು ವಿಜಯಿಗಳಾಗಿ ನಿಂತಿದ್ದ ಮೋಡಿ ಆಟದವರ ತಲೆಯ ಮೇಲೆ ಆ ಹುಡಿಯನ್ನು ಎರಚಿದರು. ಮೊಹರಂ ಪಬ್ಬದಲ್ಲಿ ಎರಚುವ ಬುಕ್ಕಿಟ್ಟಿನ ಪುಡಿಯಿರಬೇಕು, ಎಂದು ನಮ್ಮ ನಂಬಿಕೆ. ಎಂಟು ಹತ್ತು ಪೊಟ್ಟಣಗಳ ಪುಡಿ. ಮಾಗಿಯ ಕಾಲ, ಗಾಳಿ ಬೀಸುವ ಕಾಲ. ನೋಡಿ, ಎಲ್ಲೆಲ್ಲೂ ಹಾರಿ ಪರಡಿತು. ಎಲ್ಲರಿಗೂ, ತಲೆ, ಮುಖ, ಕತ್ತು, ಕೊರಳು, ಎದೆ, ಕೈ ಎಲ್ಲೆಲ್ಲೂ ಆ ಪುಡಿ ಬಿತ್ತು. ಮೋಡಿಯವರಿಗೆ, ಹುಡುಗರಿಗೆ, ಮುದುಕರಿಗೆ ಎಲ್ಲರಿಗೂ ಪುಡಿಬಿತ್ತು.

ಕೇಳಬೇಕೆ. ಆಮೇಲೆ ನಡೆದ ಮೋಡಿಯನ್ನು—ಕುಣಿತವನ್ನು ! ಕೋತಿಗೆ ಹೆಂಡ ಕುಡಿಸಿ ಚೇಳು ಕಡಿಸಿದರಂತೆ.

ಇಲ್ಲಿ ಎಲ್ಲರೂ ಕೋತಿಗಳಾಗಿ, ಹೆಂಡ ಕುಡಿದು, ಚೇಳು ಕಡಿಸಿಕೊಂಡವ ರಾದರು. ತಲೆಕೊಡವಿ, ಮೈ ಬಟ್ಟೆ ಬಿಚ್ಚಿ, ಹಿಂದೆ ಕೆರೆದುಕೊಂಡು—ಮುಂದೆ ತುರಿಸಿಕೊಂಡು, ಮೈಕೈ ಹೊಸೆದುಕೊಂಡು ಹಲ್ಲು ಗಿಂಜಿಕೊಂಡು, ಜನ ಒದ್ದಾ ಡಿದರು. ಆ ಘಟಂಗರಿಗೆ ತಾವು ನಡೆಸಿದ ಮೋಡಿ ದಿಗ್ವಿಜಯಕ್ಕೆ ನಗು. ಮೋಡಿ ಯವರ ಮಾಟವೂ ನಸಗುನ್ನಿಕಾಯಿ ಪುಡಿಯ ತಿಂಡಿಯನ್ನು ತಡೆಯಲಾಗ ಲಿಲ್ಲ. ಅವರೂ ಬಿದ್ದು, ಕೂಡಲೆ ಹೆಂಡಕುಡಿದ ಮತ್ತಿನಿಂದ ಹೊರಳಿ ಕಿರಿ ಚಿದರು. ಆ ಹೆಂಗಸರು ರವಿಕೆ ಬಿಚ್ಚಿಕೊಂಡು, ತಲೆ ಒದರಿಕೊಂಡು, ಮೈ ಬಟ್ಟೆ ಕೊಡವಿಕೊಂಡು, ಹಾಳು ದುರ್ಭಾಷೆಯಲ್ಲಿ ಶಪಿಸಿ ಬೈದರೂ ಕಡಿತ, ತುರಿ, ನವೆ, ಉರಿ ನಿಲ್ಲಲಿಲ್ಲ.

ಚಿಗಟ ಹತ್ತಿದ ನಾಯಿಗಿನ್ನ ಕಡೆಯಾಗಿ, ಕಡಿತ ಸಹಿಸಲಾರದೆ ಮನೆಗೆ ಬಂದೆವು. ಈ ನೋವಿನಲ್ಲಿ ಮುಂದೆ ಬೀಳಬಹುದಾದ ಒದೆತಗಳು ನೆನಪಿಗೆ ಬರಲಿಲ್ಲ. ಆ ಮೋಡಿಯಲ್ಲಿ ಯಾರು ಗೆದ್ದರೆಂಬುದೂ ಬೇಡವಾಯಿತು. ಹಾಗಿತ್ತು ಆ ನಸಗುನ್ನಿಪುಡಿಯ ಮೋಡಿ !

ಅದಾದ ಮೇಲೆ ಒಂದು ದಿನ ನಮ್ಮ ತಂದೆಯನ್ನು ಕೇಳಿದೆ, 'ಮೋಡಿ ನಿಜವೇ ?' 'ಕಳ್ಳರು, ಅವರೆಲ್ಲ ಮಾತನಾಡಿಕೊಂಡು ಹಾಗೆ ನಟಿಸುತ್ತಾರೆ,' ಎಂದರು. ಆದರೆ ನಸಗುನ್ನಿಯ ಬಗ್ಗೆ ಅವರನ್ನು ಕೇಳಿ ತಿಳಿಯಬೇಕಾಗಿರಲಿಲ್ಲ.

# ಮಾನವರ ನ್ಯಾಯ

ಮರಿಯು, ಅವನ ಮಗ ಇಬ್ಬರೂ ಹಟ್ಟಿಯಲ್ಲಿ ಮಲಗಿದ್ದರು. ಹಿಟ್ಟು, ಅವರೆಕಾಯಿ ಎಸರು ಬಹಳ ವೈನಾಗಿತ್ತಂತೆ. ತುಂಬ ತಿಂದಿದ್ದ. ಇಷ್ಟು, ವರ್ಷಕ್ಕೆ ಇಂದೇ ಅವನು ತಾನು ತಿನ್ನುವ ಸಾರಿಗೆ ಸ್ವಲ್ಪ ಸಾಮಾನು ಹಾಕಿದ್ದು. ರಾಗಿ ಮುದ್ದೆಗೆ ಕಾರದ ನೀರಿನ ಹೊರತು ಇನ್ನೇನೂ ತಿಂದವನಲ್ಲ.

ಆದರೆ ಇವನ ಹಳ್ಳಿಯಲ್ಲೆಲ್ಲ ಜನರಿಗೆ ಗೊತ್ತು—ಬಹಳ ದುಡ್ಡು ಕೂಡಿಟ್ಟಿದ್ದಾನೆ; ಚೆನ್ನಾಗಿ ಬೇಸಾಯ ಮಾಡಿ ದುಡಿದು ಇಟ್ಟಿದ್ದಾನೆ, ಎಂದು.

ಮನೆಯಲ್ಲಿ ಇನ್ನಾರೂ ಇಲ್ಲ. ಮರಿಯ ಮತ್ತು ಅವನ ಎಂಟು ವರ್ಷದ ಚಿಕ್ಕಮಗ—ಎಂಕಟ. ಆ ಹುಡುಗನ ಸಲುವಾಗಿ ಹೀಗೆ ಹೊಟ್ಟೆಗೆ ತಿನ್ನದೆ—ಅದಕ್ಕೂ ತಿನ್ನಿಸದೆ ಕೂಡಿಹಾಕುತ್ತಿದ್ದನೊ? ಅಥವ ತಾನು ಇನ್ನೇನಾದರೂ ದೂರದ ಆಶೆಯಿಟ್ಟು, ಮನೆಗೊಂದು ಹೆಣ್ಣು ತುಂಬಿಸಿಕೊಳ್ಳಲು ಹೀಗೆ ಕೂಡಿಡುತ್ತಿದ್ದನೊ?

ಅವನ ವಯಸ್ಸು ದಾಟಿದೆ. ತಾನೆ ಅದನ್ನೂ ಹೇಳುತ್ತಾನೆ. ತನಗೆ ಮದುವೆ ಆಸೆಯಿಲ್ಲ, ಎಂತಲೂ ಹೇಳುತ್ತಾನೆ.

ಮರಿಯು ಬಹಳ ಬಲವಾದ ಆಳು. ಕರ್ರಗೆ ಸೈಂಧವನಾಗಿದ್ದಾನೆ. ಮುಖದ ಮೇಲೆ, ಹಣೆಯ ಮೇಲೆ ಸುಕ್ಕಿನ ಗೆರೆಗಳು ಮುಖದ ಕ್ರೂರತನವನ್ನು ಹೆಚ್ಚಿಸುತ್ತವೆ. ಬಲವಾದ ಕೈಗಳು. ತನ್ನ ವಯಸ್ಸಿಗೆ ಸಾಧ್ಯವಲ್ಲದ

ಶಕ್ತಿ ಅವನಿಗಿದೆ. ಅಂಥ ತಿಂಡಿ ತಿಂದೂ ಹೀಗಿದ್ದಾನಲ್ಲ! ಅವನ ದುಡಿಮೆ ಅಷ್ಟಿದೆಯಲ್ಲ! ಅವನ ಗದ್ದೆ ಬೆಳೆ ಅಷ್ಟು ಚೆನ್ನಾಗಿ ಬರುತ್ತದಲ್ಲ! ಆದರೆ ಅವನಿಗಿರುವುದೆಲ್ಲ ಒಂದೇ ಪಿಳ್ಳೆ. ಅದು ಪೀಚುಕಾಯಿಯುಂತೆ ಇದೆ. ಹೊಟ್ಟೆಗೆ ತಿನ್ನದೆ ಬಹಳ ಗಂಟು ಕೂಡಿ ಹಾಕಿಷ್ಟಾನೆ—ಹೀಗೆಲ್ಲ ಸುತ್ತಲ ಜನ ಮಾತ ನಾಡಿಕೊಳ್ಳುತ್ತಾರೆ.

ಮರಿಯು, ಎಂಕಟ ಕಂಬಳಿ ಸುತ್ತಿಕೊಂಡು ಮಲಗಿದ್ದಾರೆ. ಮರಿಯು ತಿಂದ ಮುದ್ದೆ ಗಂಟಲಲ್ಲೆ ಇವೆ. ತೇಗುತ್ತಾನೆ. ಉಬ್ಬಸಗೊಳ್ಳುತ್ತಾನೆ. ಆತನ ಮನಸ್ಸಿಗೆ ಅಂದು ಬಹಳ ಉಲ್ಲಾಸ. "ಏನಲಾ ಮರಿ, ಯಸರು ಪ್ಯಾಂಗಿತ್ತೊ?" ಎಂದು ಮಗನನ್ನು ಕೇಳುತ್ತಾನೆ.

"ಚಂದಾಗಿತ್ತಪ್ಪ! ದಿನಾ ಹಂಗೇ ಮಾಡು."

"ಥೂ! ಕಳ್ಳಬೊಡ್ತಿ—ದುಡ್ಡು ಯಾವನ್ತಾ ಕೊಡಾವ?"

ಮಗ ಸುಮ್ಮನಾದ.

ಹೊಟ್ಟೆಯ ಉಬ್ಬಸದಿಂದ ಇಬ್ಬರಿಗೂ ನಿದ್ದೆ ಹತ್ತಲಿಲ್ಲ. ಹೊಸೆದಾಡಿ ಕೊಂಡು ಗೋಣಿ ಚೀಲದ ಮೇಲೆ ಮಲಗಿದ್ದರು.

ನಿದ್ದೆ ಬಂದದ್ದು ನಿಧಾನವಾಗಿಯೇ ಆದರೂ ಗಾಢವಾಗಿಯೆ ಬಂದಿತ್ತು.

ಮಧ್ಯರಾತ್ರಿ ಸುಮಾರು ಒಂದರ ಹೊತ್ತಿಗೆ ಇವನಿಗೆ ಹೇಗೊ ಎಚ್ಚರಾ ಯಿತು. ಏನೊ ಮನಸ್ಸಿಗೆ ಹೊಳೆಯಿತು. ಮಗನನ್ನು ಎಬ್ಬಿಸಿ, ಕೂಡಲೆ ಲಾಟೀನು ಹಚ್ಚಿ ಮೂಲೆಯಲ್ಲಿಟ್ಟಿದ್ದ ದೊಣ್ಣೆ ತೆಗೆದುಕೊಂಡ. ಹುಡುಗ ಹಿಂದೆ ಲಾಟೀನು ಹಿಡಿದುಕೊಂಡಿದ್ದ.

ಅವರು ನಾಲ್ಕೈದುಜನವಿದ್ದರು. ಮೂರುನಾಲ್ಕು ಜನ ಅಗಲೆ ಸಾಗಿ ಸುತ್ತಿದ್ದರು. ಇನ್ನೊಬ್ಬ ಅದೂ ಇದೂ ತಡಕುತ್ತಿದ್ದ.

ಮರಿಯುನಿಗೆ ಎಲ್ಲ ಹೊಳೆಯಿತು. ತಾನೊಬ್ಬ; ಅವರಷ್ಟು ಜನ. ಮರಿಯನ ಕೈಯ ದೊಣ್ಣೆ ರೊಯ್ಯನೆ ಹೋಯಿತು. ತಡಕುತ್ತಿದ್ದವನು, "ಅಯ್ಯೊ!" ಎಂದು ಕುಸಿದು ಬಿದ್ದ. ಇವನು ಓಡಿಹೋಗಿ ಅವನ ಮೇಲೆ ಹತ್ತಿ ಕೂಡಬೇಕು, ಅಷ್ಟರಲ್ಲಿ ಇನ್ನೊಬ್ಬ ಬಂದು ಹಿಂದಿನಿಂದ ಇವನ ಕತ್ತು

ಒಡಿದ. ಬಾತುಕೋಳಿಯ ಕತ್ತು ಹಿಡಿದು ಹಿಸುಕುವಂತೆ ಕತ್ತು ಹಿಂಡತೊಡಗಿದ. ಇವನಿಗೆ ಬಿಡಿಸಿಕೊಳ್ಳಲಾಗದು. ಹಿಂದಿನವನು ಮೊಣಕಾಲಿನಿಂದ ಸೊಂಟಕ್ಕೆ ಪಕ್ಕೆಗಳಿಗೆ ಒದೆಯುತ್ತಿದ್ದಾನೆ. ಇವನೆಷ್ಟು ಹೊಸೆದಾಡಿದರೂ ಆ ಹೆಬ್ಬಾವಿನ ಒಡಿತದಂತಹ ಹಿಡಿತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ.

ಹುಡುಗ ನೋಡುತ್ತಲೆ ಇವೆ. ಲಾಟೀನು ದೀಪದ ಬೆಳಕಿನಲ್ಲಿ ಎಲ್ಲ ಕಾಣಿಸುತ್ತದೆ. ತನ್ನ ತಂದೆಯ ಕತ್ತು ಹಿಸುಕುತ್ತಿರುವುದೂ ಗೊತ್ತಾಗುತ್ತದೆ. ಆದರೆ ಆ ಎಳೆಯ ಬಾಲಕ ಏನು ಮಾಡಬೇಕು!

ಹೊಡೆದಾಟ, ತಿಕ್ಕಾಟ ನಡೆದೂ ನಡೆದೂ ಕೊನೆಗೆ ನಿಂತಿತು. ಹಿಂದಿನವನು ತನ್ನ ಹಿಡಿತ ಬಿಡಲೆ ಇಲ್ಲ. ವ.ರಿಯನ ದೇಹ ಜಡವಾಗುತ್ತ ಬಂದಿತು. ಭಾರವಾಯಿತು. ಹಿಂದೆ ಹಿಡಿದವನು ತೂರಾಡಿದ.

ಉಳಿದವರು ಬಂದು ಮೇಲುಸಿರು ಆಡುತ್ತಿರುವ ದೇಹವನ್ನು ಈಚೆಗೆ ಎಳೆದು ಬಿಸಾಡಿದರು ಅದು ಧೊಪ್ಪೆಂದು ಬಿದ್ದಿತು. ಆದನ್ನು ತುಳಿದು, ಒದೆದು, ಆದರ ಮೇಲೆ ಉಗುಳಿದರು.

ಯಾರೊ ಒಬ್ಬ ಬಂದು ಆ ಹುಡುಗನ ಕೆನ್ನೆಗೆ ಛಠಾರನೆ ಹೊಡೆದ. ಅದು, ತಲೆ ತಿರುಗಿ ಉರುಡಿ ಬಿತ್ತು. ಕೈಯ ಲಾಟೀನು ಒಡೆದು ಚೂರಾಯಿತು. ಉಳಿದವರು ನಿಶ್ಯಬ್ದವಾಗಿ ಎಲ್ಲ ದೋಚಿ ಸಾಗಿಸಿಕೊಂಡು ಹೋದರು.

ಬೆಳಗಿನ ಜಾವದ ತಂಗಾಳಿಗೆ ಹುಡುಗನಿಗೆ ಪ್ರಜ್ಞೆ ಬಂದಿತು. ಆ ಭೀಕರ ವ್ಯಾಪಾರ ನೆನಪಿನಲ್ಲಿ ಇದೆ. ಕತ್ತಲು ಹರಿದು ಕೊಂಚ ಕೊಂಚ ಬೆಳಕಾಯಿತು ಹುಡುಗ ಕಾಲಿನಲ್ಲಿ ತೆವಳಿಕೊಂಡು ಹೋಗಿ ಆ ದೇಹದ ಮೇಲೆ ಬಿದ್ದು, "ಅಪ್ಪಾ ! ಅಪ್ಪಾ ! ಏಳೊ ! ಅವರು ಹೋದರು ಏಳೋ !" ಎಂದು ಒರಲಿದ.

"ಅಪ್ಪಾಲೆ ! ಯಾಕೊ ಇಷ್ಟು ಹೊತ್ತು ನಿದ್ದೆ ಮಾಡ್ತೀ ? ಅವರೆಲ್ಲ ಹೊತ್ತುಕೊಂಡು ಹೋದ್ರೊ !"

ಅತ್ತಿತು. ಭಯದಿಂದ ಅತ್ತಿತು. ಭಯದಿಂದ ಸುಮ್ಮನಾಗುತ್ತಿತ್ತು. ಅದಕ್ಕೆ ಏನೊ ತಿಳಿಯಿತು. ಏನೊ ತಿಳಿಯಲಿಲ್ಲ.

ತನ್ನ ಅಪ್ಪನನ್ನು ಆತ ಏಕೆ ಕತ್ತು ಹಿಸುಕಿದ? ಅವರೇಕೆ ತಮ್ಮ ಮನೆ ಸಾಮಾನು ಒಯ್ದರು? ತನಗೇಕೆ ಅವರು ಹೊಡೆದರು? ತಾನು ಅವರಿ ಗೇನೂ ಮಾಡಲಿಲ್ಲ. ತಮ್ಮ ಸಾಮಾನೆಲ್ಲವೂ ಹೀಗೆ ಹೋಗಿದ್ದರೂ ಅಪ್ಪ ಇನ್ನೂ ಮಲಗಿದ್ದಾನಲ್ಲ!

ಅಪ್ಪನಿಗೆ ಚಳಿಯಾದೀತಲ್ಲವೆ? ಮನೆಯೊಳಕ್ಕೆ ತಡಕುತ್ತ ಹೋದನು. ಕಾಲಿಗೆ ಗಾಜು ಚುಚ್ಚಿತು. ನೋವಿಗೆ ಮಡುಗ, "ಅವ್ವ!" ಎಂದನು. ಆ ಕೂಸು ತನ್ನ ತಾಯಿಯನ್ನು ನೋಡಿರಲಿಲ್ಲ. ಕಾಲು ಮುಟ್ಟಿಕೊಂಡಿತು. ಕೈಗೆ ಏನೊ ಹಸಿ. ಅಂಗಿಗೆ ಒರೆಸಿಕೊಂಡಿತು. ಕಾಲಿನ ಗಾಜು ಕಿತ್ತುಹಾಕಿ, ಮುಂದೆ ತೆವಳಿತು.

ಕಂಬಳಿ ಸಿಕ್ಕಿತು. ತಂದು ತಂದೆಗೆ ಹೊದಿಸಿ ಕಾಲ ಹತ್ತಿರ ಕುಳಿತನು. ಭಯದಿಂದ ಬೆಚ್ಚುವ ಹಾಗಾಗುವುದು. ಮೈ ನಡಗುವುದು. ಅಜ್ಞನಾದ ಆ ಬಾಲಕನ ಬುದ್ಧಿಗೆ ನಡೆದುದೇನು ಎಂಬುದು ಸ್ಪಷ್ಟವಾಗಲಿಲ್ಲ. ಆದರೂ ಮನಸ್ಸಿಗೆ ಏನೊ ಅನ್ನಿಸುತ್ತದೆ. ಸತ್ತು ಹೋದನೆ?

ಮೌನವಾಗಿ ಅಳುತ್ತದೆ. ಗಟ್ಟಿಯಾಗಿ ಅತ್ತರೆ ಇನ್ನೇನಾದೀತೊ, ಎಂದು ಮೌನವಾಗಿ ಅಳುತ್ತದೆ. ಆ ಅನಾಥವಾದ ಕೂಸು, ಏಕಾಂಗಿ ಯಾದ ಕೂಸು, ತನ್ನ ತಂದೆಯ ಕೊಲೆಯನ್ನು ಕಣ್ಣಿಂದಲೆ ನೋಡಿದ ಕೂಸು ಮೌನವಾಗಿ ಅಳುತ್ತದೆ. ಅರಿಯದ ಶೋಕದಿಂದ, ತಿಳಿಯದ ವಿಪತ್ತಿನಿಂದ ಗೊತ್ತಾಗದ ಅಸಹಾಯಕತೆಯಿಂದ ಮೆಲ್ಲನೆ ಅಳುತ್ತದೆ. ಬಿಕ್ಕಿ ಬಿಕ್ಕಿ ಅಳು ತ್ತದೆ.

ತಂದೆಗೆ ಮೈ ನೋವಾಗಿದೆಯೋನೋ, ಎಂದು ಬಗೆದು ತನ್ನ ದುರ್ಬಲ ಕೈಗಳಿಂದ ಹಿಸುಕುತ್ತದೆ. ಆ ಜಡವಾಗಿ ಬಿದ್ದಿದ್ದ ದೇಹದ ಕಾಲುಗಳನ್ನೂ ತುಳಿಯುತ್ತದೆ. ಮತ್ತೆ ಸುಮ್ಮನಾಗುತ್ತದೆ. ಸುಮ್ಮನಾಗಿ ನೆನೆಸಿಕೊಂಡು ಅಳುತ್ತದೆ.

ಬೆಳಗಾಯಿತು. ಹುಡುಗನಿಗೆ ಗೊತ್ತಾಗದು—ಏನೇನು ಮಾಡಬೇಕು? ಹಟ್ಟಿಯ ದನ ಹೊರಕ್ಕೆ ಹೊಡೆಯಬೇಕೆ? ತಂಗಳು ತಿಂದು ದನ ಬಿಟ್ಕೊ ಕೊಂಡು ಹೋಗಬೇಕೆ? ಅಪ್ಪ ಏಳಲೇ ಇಲ್ಲ!

ಊರವರು ಬಂದರು. ಕೊಲೆಯಾದ ಸಮಾಚಾರ ಬೆಳಗು ಆಗುವುದ ರೊಳಗಾಗಿ ಊರಲ್ಲೆಲ್ಲ ಹರಡಿದೆ. ಹೇಗೆ ಹರಡಿತು? ಯಾರು ಹರಡಿಸಿ ದರು? ಊರವರಲ್ಲಿ ಕೆಲವರಿಗಾದರೂ ಗೊತ್ತಿತ್ತೆ?

ಗುಜು ಗುಜು ಆಯಿತು; ಗುಂಪು ಸೇರಿತು. ಮನೆಯೊಳಕ್ಕೆ ಬರಲು ಯಾರಿಗೂ ಧೈರ್ಯವಾಗದು. ಮನೆ ಸುತ್ತಲೂ ಸುಮ್ಮನೆ ಗೇರಾಯಿಸಿದ್ದಾರೆ. ಪೋಲೀಸಿನವರು ಬರಬೇಕು, ಪಟೇಲರು ಬರಬೇಕು, ಪಂಚಾಯಿತಿದಾರರು ಕೂಡಬೇಕು ಎಂದು ಮಾತಾಡುತ್ತಾರೆ.

ಕೆಲವರು ಹುಡುಗನನ್ನು ಕರೆದು, "ಎಂಕಟ, ಯಾಕಲಾ ಹೆಂಗಿದ್ದೀ? ಬಾರಲಾ ಹೊರಗೆ. ಎಲ್ಲಾ ನಿಮ್ಮಪ್ಪ?" ಕೇಳುತ್ತಾರೆ.

"ಅಪ್ಪ ಮಲಗವನೆ; ಗಾಸಿ ಆಗೈತೆ ಅಪ್ಪನ ಮೈಗೆ!"

ಏನೋ ಧೈರ್ಯಮಾಡಿ ಕೆಲವರು ಬಂದು ನೋಡಿದರು. ಮರಿಯನ ಅಂಥಾ ಭಾರಿ ದೇಹ ಸುರುಟಿಕೊಂಡು ಉರುಳಿತ್ತು. ಬಾಯಿಯಿಂದ ತಿಂದ ಹಿಟ್ಟು ಸಾರು ಹೊರಕ್ಕೆ ಬಂದು, ಅದರ ವಾಸನೆ ಇನ್ನೂ ಬಡಿಯುತ್ತದೆ. ಮುಖದ ಮೇಲೆಲ್ಲಾ ನೊಣಗಳು. ಮುಖ ಭಯಂಕರವಾಗಿ, ವಿಕಾರವಾಗಿ ಕಿವಿಚಿದೆ.

ತನ್ನ ಗುರುತಿನವರನ್ನು ಕಂಡು ಹುಡುಗ, "ಅಣ್ಣಾ, ಮಾವಾ, ಅಪ್ಪನ್ನ ಎಬ್ಬಿಸಿರಿ!" ಎನ್ನುತ್ತದೆ.

"ಇನ್ನೆಲ್ಲಿ ಎಬ್ಬಿಸೋದೊ? ನಿಮ್ಮಪ್ಪ ಹೊಂಟ."

"ಎಲ್ಲಿಗೆ ಹೊಂಟ?"

"ನಮ್ಮಪ್ಪ ಹೋದಲ್ಲಿಗೆ ಹೊಂಟ."

"ನಿಮ್ಮಪ್ಪ ಎಲ್ಲಿಗೆ ಹೋದ?"

"ಸತ್ತು ಹೋದ."

"ನಿಮ್ಮ ಅಪ್ಪನ್ನ ಅವರು ಹಿಂಗೇ ಕತ್ತು ಕಿವಿಚಿ ಸಾಯಿಸಿದ್ರಾ ?"

"ಇಲ್ಲ, ಸುಮ್ಮಗಿರು."

ಪೊಲೀಸರು ಬಂದುದೂ ಆಯಿತು. ಅವರ ಪರೀಕ್ಷೆಯೆಲ್ಲ ಆಗಿ, ಆಸ್ಪತ್ರೆಗೆ ಸಾಗಿಸಿ, ಅಲ್ಲಿ ಆಗುವುದೆಲ್ಲ ಆಗಿ, ಪಂಚಾಯಿತದಾರರು ಸೇರಿ, 'ಮರಿಯನನ್ನು ಯಾರೋ ಕತ್ತುಹಿಸುಕಿ ಸಾಯಿಸಿದರು,' ಎಂದು ತೀರ್ಮಾನಮಾಡಿ, ಕಾಗದಕ್ಕೆ ರುಜು ಹಾಕಿದರು. ಮರಿಯನ ಕೈಯ ಉಗುರುಗಳಿಗೆ ಹತ್ತಿದ್ದ ರಕ್ತವನ್ನು ಪೊಲೀಸರು ನೋಡಿ ಗುರುತಿಟ್ಟುಕೊಂಡರು. ಅವನ ಬಟ್ಟೆಯ ಮೇಲೆ ಹತ್ತಿದ್ದ ರಕ್ತದ ಕಲೆಯನ್ನೂ ಗಮನಿಸಿದ್ದರು.

ಮುಂದಿನದು ಯಾರ ಯಾರದೊ ಸಹಾಯದಿಂದ ನಡೆಯಿತು. ಗತಿಯಿಲ್ಲದ ಹುಡುಗ ಯಾರದೊ ಮನೆ ಸೇರಬೇಕಾಯಿತು.

ಪೊಲೀಸರು ತಮ್ಮ ಕಾರ್ಯ ನಡೆಸುತ್ತಲೆ ಇದ್ದು, ಕೊನೆಗೆ ಹಲವರ ಮನೆ ಜಫ್ತಿಮಾಡಿ, ಹಲಕೆಲವು ಸಾಮಾನು ಶೋಧಿಸಿದರು. ಯಾರ ಮೇಲೆ ಗುಮಾನಿ ಇಟ್ಟಿದ್ದರೊ ಅವರು ಆ ಘಟನೆ ನಡೆದಾಗ ಊರಲ್ಲೆ ಇರಲಿಲ್ಲವಂತೆ. ಆ ರಾತ್ರಿ ಊರಲ್ಲಿದ್ದವರೆಲ್ಲ ಬಹಳ ಒಳ್ಳೆಯ ಜನರಂತೆ.

ಹುಡುಗನಿಗೆ ಪತ್ತೆಯಾದ ಸಾಮಾನು ಗುರುತಿಸಲು ಕರೆದುಕೊಂಡು ಹೋದರು. ಕಡಲೆ ಪುರಿ ತಿನ್ನಿಸಿ, 'ಇದರಲ್ಲಿ ಯಾವುದು ನಿಮ್ಮದು ಹೇಳು,' ಎಂದರು.

ಹುಡುಗ ಸುಮ್ಮನೆ ನಿಂತುಬಿಟ್ಟ.

"ಇವು ಯಾವುದೂ ನಿಮ್ಮದು ಅಲ್ಲವೇನಪ್ಪ ?" ಎಂದು ಪೊಲೀಸ್ ಅಧಿಕಾರಿ ಕೇಳುತ್ತಾನೆ.

ಹುಡುಗನಿಗೆ ಆಗಲೂ ಏನೂ ತಿಳಿಯಲಿಲ್ಲ.

ಇನ್ಸ್‌ಪೆಕ್ಟರ್ ಇನ್ನೂ ನಿಧಾನಮಾಡಿ, ಹುಡುಗನಿಗೆ ವಿವರಿಸಿದ: "ಇದು ನಿಮ್ಮ ಸಾಮಾನು ಆಗಿದ್ದರೆ ಹೇಳು. ನಾವು ಕಳ್ಳರನ್ನ ಪತ್ತೆಮಾಡತೀವಿ. ಕೆಲವರ ಮನೆಯಲ್ಲಿ ಈ ಸಾಮಾನು ಇದ್ದವು. ನಿಮ್ಮ ಸಾಮಾನು ನೀನು ಗುರುತಿಸಿದರೆ ಆಗ ಕಳ್ಳರು ಸಿಕ್ಕುತ್ತಾರೆ."

ಹುಡುಗ ಆ ಸಾಮಾನುಗಳನ್ನು ನೋಡಿಯೂ ಸುಮ್ಮನೆ ಇದ್ದ.

ಇನ್ಸ್‌ಪೆಕ್ಟರ್ ಒಂದೊಂದಾಗಿ ಎತ್ತಿ ತೋರಿಸಿದರು. ಪಾತ್ರೆಗಳಾದವು. ಬಟ್ಟೆ, ಒಡವೆ ಎಲ್ಲ ತೋರಿಸಿದರು.

ಹುಡುಗನ ಮುಖ ಅರಳಿತು. "ಅದು ನಂದು ಬೊಂಬೆ," ಎಂದಿತು.

"ಇದು ನಿಂದಾ ? ಅದ್ಹೇಗೆ ?"

ಅದೊಂದು ವಿಕಾರವಾದ ಕರಿಪುರದ ಬೊಂಬೆ—ಹುಡುಗರು ಆಡುವಂತಹದು.

"ಅದರ ಕೊಳ್ಳಿಗೆ ಮಣಿ ಕಟ್ಟೈತೆ. ಅದೇ ಮಣಿ, ಅಲ್ಲೆ ಐತೆ."

ಇನ್ಸ್‌ಪೆಕ್ಟರ್, "ಶಹಬಾಸ್ !" ಎಂದ. ಆತನಿಗೆ ಬಲು ಹರ್ಷವಾಗಿ ತನ್ನ ಶ್ರಮ ಸಾರ್ಥಕವಾಯಿತು, ಎಂದು ಉಬ್ಬಿದ.

ಪೊಲೀಸಿನವರು ಹುಡುಕಿದರು ಈ ಗೊಂಬೆ ಯಾವುದೊ ಒಂದು ಚಿಕ್ಕ ಮಣ್ಣಿನ ಕುಡಿಕೆಯಲ್ಲಿತ್ತು. ಆ ಕುಡಿಕೆಯನ್ನೂ ಹುಡುಗ ಗುರುತಿಸಿದ.

ಎಲ್ಲಾ ಸಾಮಾನನ್ನೂ ಅದಪ್ ಮಾಡಿದ್ದ ಕಳ್ಳರು, ಇದು ಯಾವ ಮಹಾಪದಾರ್ಥ ! ಎಂದು ಉಪೇಕ್ಷೆ ಮಾಡಿದ್ದರು. ಗುಮಾನಿ ಮೇಲೆ ಜಫ್ತಿ ಮಾಡಿದಾಗ, ಬುದ್ಧಿವಂತನಾದ ಇನ್ಸ್‌ಪೆಕ್ಟರ್ ಇದನ್ನು ಕಂಡು, ಬಹುಶಃ ಇದರಿಂದಲೆ ಪತ್ತೆಯಾದೀತು ಎಂದು ದೂರಾಲೋಚನೆ ನಡೆಸಿ, ತರ್ಕಿಸಿ ಅದನ್ನೂ ತಂದಿದ್ದನೇನೊ !

ಕೊಲೆಯಾದ ರಾತ್ರಿ ಮನೆಗೆ ನುಗ್ಗಿದ್ದವರಲ್ಲಿ ಯಾರನ್ನಾದರೂ ಗುರುತಿಸ ಬಹುದೇನೋ, ಎಂಬುದಾಗಿಯೂ ಹೊಳೆಯಿತು. ಹುಡುಗನಿಗೆ ಹೇಳಿ, ಸಾಲಾಗಿ ನಿಲ್ಲಿಸಿದ್ದ ಜನರನ್ನೂ ತೋರಿಸಿದ.

ಹುಡುಗನಿಗೆ ಆಗಲೆ ಖುಷಿಯಾಗಿತ್ತು. ತನ್ನ ಬೊಂಬೆ ಸಿಕ್ಕಿದೆ ; ಪೊಲೀಸಿನವರು ತಿಂಡಿ ಕೊಡಿಸಿದರು. ಇನ್ಸ್‌ಪೆಕ್ಟರ್ ಬಹಳ ಒಳ್ಳೆಯವರು.

ಹುಡುಗ ಹತ್ತಿರ ಬಂದು, ನಿಂತವರನ್ನು ನೋಡುತ್ತ, "ಇವನೆ ನಮ್ಮ ಅಪ್ಪನ ಕತ್ತು ಹಿಸುಕಿದವನು !" ಎಂದು ತೋರಿಸಿಯೇ ಬಿಟ್ಟ.

ಬೈರನಿಗೆ ಆ ಹುಡುನನ್ನು ತಿಂದು ಬಿಡುವಂಥ ಕೋಪ.

ಕಾನ್‌ಸ್ಟೇಬಲ್ ಗದರಿಸಿದ—"ಸೂವರ್, ಏನೊ ಹಾಗೆ ನೋಡ್ತೀಯಾ ಆ ಹುಡುಗನ್ನ !"

ಬೈರನ ಮೈ ಬಿಚ್ಚಿಸಿ ನೋಡಿದರು. ಅಲ್ಲಲ್ಲಿ ಉಗುರುಗಳಿಂದ ಕಿತ್ತ ಗಾಯ. ಮರಿಯ ಬಿಡಿಸಿಕೊಳ್ಳಲು ಹೋರಾಡುವಾಗ ಇವನನ್ನು ಉಗುರು ಗಳಿಂದ ಕೆತ್ತಿದ್ದಾನೆ. ಈ ಗಾಯ ಅದೇ ಎಂದು ಸ್ಪಷ್ಟವಾಗಿ ಹೇಳಬಹುದು. ಹುಡುಗನೂ ಹೇಳಿದ:

"ಲಾಟೀನು ಬೆಳಕಿನಲ್ಲಿ ನನಗೆ ಕಾಣಿಸುತ್ತಿತ್ತು."

ಇನ್ಸ್‌ಪೆಕ್ಟರ್, ತಾನು ಕೃತಾರ್ಥನಾದೆ ಎಂದು ಹುಡುಗನಿಗೆ ತನ್ನ ಮನೆಯಿಂದ ಬಾಳೆಹಣ್ಣು ಸಕ್ಕರೆ ತರಿಸಿ ಕೊಟ್ಟ.

ಬೈರ ಬೋನಿನಲ್ಲಿ ಸಿಕ್ಕ ಹುಲಿಯಂತೆ ಇದನ್ನೆಲ್ಲ ನೋಡುತ್ತಿದ್ದ.

ಪೊಲೀಸರು ಮೊಖದ್ದಮೆ ಹೂಡಿದರು. ಸೆಷನ್ಸಿಗೆ ವಿಚಾರಣೆಗೆ ಬಂದಿತು.

ತುಂಬಿದ ಕೋರ್ಟಿನಲ್ಲಿ ನಿಂತು ಇನ್ಸ್‌ಪೆಕ್ಟರ್ ನಡೆದ ಘಟನೆಯೆಲ್ಲ ವನ್ನೂ ವಿವರಿಸಿದ. ರಾತ್ರಿ ಹೊತ್ತಿನಲ್ಲಿ ಅಸಹಾಯರಾದ ತಂದೆ ಮಕ್ಕ ಳಿಬ್ಬರ ಮನೆಗೆ ನುಗ್ಗಿ, ಅವರ ಮನೆ ದೋಚಿ, ತಂದೆಯ ಕತ್ತನ್ನು ಮಗುವಿನ ಎದುರಿಗೇ ಹಿಸುಕಿ, ಅಮಾನುಷ ರೀತಿಯ ಕೊಲೆ ನಡೆಸಿದರೆಂದು ವಿವರಿಸಿದ. ಆತನ ಸಹಾಯಕ್ಕೆ ಯಾರೂ ಇಲ್ಲ—ಕೇವಲ ಏಳೆಂಟು ವರ್ಷದ ಬಾಲಕ. ಆ ಬಾಲಕನನ್ನೂ ಪಾಪಿಗಳು ಬಿಡಲಿಲ್ಲ. ಆತನಿಗೂ ಏಟು ಕೊಟ್ಟರು. ಮೂರ್ಛೆ ಹೋಗುವಂತೆ ಮಾಡಿದರು.

ಸರಿ ಈ ಆಪಾದಿತರೆ ಆ ಅಪರಾಧಿಗಳು ಹೇಗೆ?

ಹುಡುಗ ಗುರುತಿಸಿದ್ದಾನೆ. ಆತನ ಮೈಮೇಲೆ ಉಗುರುಗಳಿಂದ ಕಿತ್ತ ಗಾಯಗಳಿವೆ. ಡಾಕ್ಟರು ಪರೀಕ್ಷಿಸಿ, ಇವು ಉಗುರಿನಿಂದಾದ ಗಾಯವಿರ ಬೇಕು ಎಂದಿದ್ದಾರೆ. ಅಪರಾಧಿಯ ಮನೆಯಲ್ಲಿ ಆ ಹುಡುಗನದೆ ಆಡುವ ಬೊಂಬೆ ಪತ್ತೆಯಾಗಿ ಅದು ಘನ ಕೋರ್ಟಿನ ಅವಗಾಹನೆಗೆ ಇದೆ. ಹುಡುಗ ಅದನ್ನು ಗುರುತಿಸುತ್ತಾನೆ.

ಏನೇನೋ ಚರ್ಚೆ ವಾದಗಳು ನಡೆದವು. ಮನುಷ್ಯನಿಗೆ ತನ್ನ ಪ್ರಾಣ ಉಳಿಸಿಕೊಳ್ಳುವ ಪ್ರಮೇಯ ಬಿದ್ದಾಗ, ಅದಕ್ಕೆ ಅವಕಾಶ ದೊರೆತರೆ ಉಪಾಯಕ್ಕೆ ಕೊರತೆಯೆ ?

ಅಪರಾಧಿಯ ಲಾಯರು ವಾದಿಸಿದ.

'ಬೊಂಬೆ ವಿಚಾರ ಪ್ರಸ್ತಾಪಿಸಿ, ಇಂಥ ಬೊಂಬೆ ಎಷ್ಟು ಸಾವಿರವಿಲ್ಲ ? ಇದರಲ್ಲೇ ಏನು ಅಂತಹ ವೈಶಿಷ್ಟ್ಯ? ಕುಡಿಕೆ ಹೀಗೇ ಇರುತ್ತವೆ. ಇದೇ ಅವನ ಕುಡಿಕೆ ಎನ್ನುವುದಕ್ಕೇನು ಗುರುತು ? ಮಕ್ಕಳೆಲ್ಲ ಇಂಥ ಮಣಿಗಳನ್ನು ಬೊಂಬೆಗೆ ಕಟ್ಟುತ್ತಾರೆ.

ಆಪಾದಿತನ ಗಾಯ ಉಗುರುಗಳದೇ ಇರಬೇಕೆಂದು ಹೇಗೆ ಖಚಿತವಾಗಿ ಹೇಳುವುದಕ್ಕಾದೀತು ? ಒಂದು ವೇಳೆ ಉಗುರುಗಳಿಂದಾದರೂ, ಮರಿಯನ ಕೈ ಉಗುರುಗಳಿಂದಲೆ ಆದವು ಎಂದು ಹೇಗೆ ನಂಬುವುದು.

ಕೋರ್ಟ್ ಕೇಳಿತು: “ಹಾಗಾದರೆ ಈ ಗಾಯ ಹೇಗೆ ಆಗಿರಬೇಕು ?” “ಹೇಗಾದರೂ ಆಗಿರಬಹುದು. ಗಂಡ ಹೆಂಡಿರ ಜಗಳದಲ್ಲಿ ಆಗಿರಬಹುದು !”

ಜನ ನಕ್ಕರು.

ಜಡ್ಜರು, “ಇದು ಸಾವು ಬದುಕಿನ ವಿವರಣೆ. ಇಲ್ಲಿ ಹಾಸ್ಯ ಕುಚೋದ್ಯಕ್ಕೆ ಅವಕಾಶವಿಲ್ಲ !” ಎಂದು ಎಚ್ಚರಿಸಿದರು.

ಎಂಕಟನೂ ಬಂದಿದ್ದ ಕೋರ್ಟಿಗೆ. ಅವನೆ ಮುಖ್ಯಸಾಕ್ಷಿ.

ಪೊಲೀಸರು, ತಾನು ಹೇಗೆ ಹೇಳಬೇಕೆಂಬುದನ್ನು ತಿಳಿಸಿದ್ದಾರೆ. ಆದರೆ ಕೋರ್ಟಿನ ನಡವಳಿಕೆ ಇವನಿಗೆ ಅರ್ಥವಾಗಲಿಲ್ಲ.

ಹುಡುಗ ಒಂದೊಂದು ಬಾರಿ ಕಟಕಟೆಯಲ್ಲಿ ನಿಂತಿದ್ದ ಅಪರಾಧಿಗಳನ್ನು ನೋಡುತ್ತಾನೆ. ಅವರು ದೈನ್ಯದ ಮುಖ ಹಾಕಿಕೊಂಡು ಕೈ ಮುಗಿದುಕೊಂಡು ಜಡ್ಜರನ್ನು ನೋಡುತ್ತಾರೆ.

ಆದರೆ ಹುಡುಗ ನೋಡಿದಾಗ ಇತರರಿಗೆ ಕಾಣದ ಹಾಗೆ ಆತನನ್ನು ಹೆದರಿಸುತ್ತಾರೆ. ಹುಡುಗ, ತನ್ನ ಹತ್ತಿರದ ಕಾನ್‌ಸ್ಟೇಬಲಿಗೆ ತೋರಿಸು

ತ್ತಾನೆ. ಅವನು, 'ಸುಮ್ಮಗಿರು ಅವರಿಗೆ ಸರಿಯಾದ್ದು ಆಗ್ತದೆ,' ಎಂದರೆ ಹುಡುಗನಿಗೆ ಹಿಗ್ಗು.

ಹುಡುಗನ ಸಾಕ್ಷಿ ಈಗಲೆ ನಡೆಸುವುದೆ? ಪೋಲೀಸರಿಗೆ ಧೈರ್ಯವಿದೆ. ಕೆಳಗಿನ ಕೋರ್ಟಿನಲ್ಲಿ ಸರಿಯಾಗಿ ಹೇಳಿದ್ದಾನೆ. "ಹೇಳ್ತಿಯೇನೋ ಸರಿಯಾಗಿ?" ಪಿಸುಮಾತಿನಲ್ಲಿ ಇನ್ಸ್‌ಪೆಕ್ಟರ್ ಕೇಳಿದ.

"ಹೇಳ್ತೀನಿ."

ಅಪರಾಧಿ ಲಾಯರು, "ವಿಚಾರಣೆ ಕೂಡಲೆ ನಡೆಯಬೇಕು," ಎಂದು ಕೇಳಿಕೊಂಡನು.

ಜಡ್ಜರು ಇವರುಗಳನ್ನೂ ನೋಡಿದರು: "ಆಗಬಹುದೆ?"

"ಸರಿ, ಆಗಬಹುದು."

ಹುಡುಗನನ್ನು ಕಟಕಟೆಗೆ ಸೇರಿಸಿದರು.

ಜಡ್ಜರು ಕೇಳುತ್ತಾರೆ— "ಏನಪ್ಪ, ನಿನ್ನ ಹೆಸರೇನೊ?"

ಹುಡುಗ ಸುಮ್ಮನಿದ್ದ.

"ಎಂಕಟ ಅಲ್ಲವೇನೊ?"

ಹುಡುಗ ಉಗುರು ಕಿತ್ತು ಕೊಳ್ಳುತ್ತಿತ್ತು.

"ನೋಡು, ಕತ್ತೆತ್ತು, ಹೇಳು."

"ಹೌದು, ಅಂತ ಹೇಳೋ ಮಗಾ" ಎಂದು ಸರ್ಕಾರದ ವಕೀಲರು ಹೇಳಿದರು.

"ಈ ಕ್ರಮ ಸರಿಯಲ್ಲ, ನಾನಿದನ್ನು ವಿರೋಧಿಸುತ್ತೇನೆ. ಸಾಕ್ಷಿಗೆ ಉತ್ತರ ಹೇಳಿಕೊಡುವುದೆ?"

ಜಡ್ಜ್—"ಇದರಲ್ಲಿ ಹೇಳಿಕೊಡುವುದೇನು ಬಂತು? ಹುಡುಗನಿಗೆ, 'ಮಾತನಾಡು,' ಎಂದು ಹೇಳುವುದರಲ್ಲಿ ಏನೂ ಅಭ್ಯಂತರವಿಲ್ಲ. ಅವನ ಹೆಸರು ಎಂಕಟ."

"ಎಂಕಟ ಹೌದೋ, ಅಲ್ಲವೊ; ಇಲ್ಲದ್ದನ್ನು ಪ್ರೇರೇಪಿಸಲು ಇದು ಅವಕಾಶ ಕೊಡುತ್ತದೆ."

"ನಿಮ್ಮ ವಾದವನ್ನು ನಾನು ಒಪ್ಪುವುದಿಲ್ಲ. ಇಂಥ ಸಾಧಾರಣ ಪ್ರಶ್ನೆಗಳಿಗೆ—ಅದರಲ್ಲೂ ಅಂಥ ಚಿಕ್ಕ ಹುಡುಗನಿಗೆ ಕೇಳುವ ಪ್ರಶ್ನೆಗಳಿಗೆಲ್ಲ ಆಕ್ಷೇಪಣೆಯಿತ್ತರೆ ಹೇಗೆ ?"

"ನನ್ನ ಕಕ್ಷಿಯ ಪ್ರಾಣದ ಹೊರೆ ನನ್ನದು, ಅದನ್ನು ನಾನು ಕಾಯ ಬೇಕು."

ಸರ್ಕಾರದ ವಕೀಲ, "ನೀವೇ ಕೇಳಿ," ಎಂದರು.

ಜಡ್ಜರು ಒಪ್ಪಲಿಲ್ಲ—"ಇದು ಮೊದಲ ವಿಚಾರಣೆ, ಪಾಟೀ ಸವಾಲಲ್ಲ. ನೀವೇ ಕೇಳಿ."

"ನಿಮ್ಮ ತಂದೆಯನ್ನು ಯಾರಪ್ಪಾ ಕೊಂದರು ?"

"ಈ ಪ್ರಶ್ನೆಗೆ ನಾನು ಆಕ್ಷೇಪಿಸುತ್ತೇನೆ. ಸಾಕ್ಷಿಯ ಹೇಳಿಕೆಯಾಗದೆ ಮೊದಲೆ ಇಂಥ ಬಹು ಮುಖ್ಯ ಪ್ರಶ್ನೆ ಹಾಕುವುದಕ್ಕೆ ಅವಕಾಶವಿಲ್ಲ."

"ಇದು ವಿಲಕ್ಷಣ ವಾದ ; ಕೊಲೆಯಾಗಿರುವುದು ಸುಳ್ಳೆ ? ಭೂತ ಬಂದು ಕೊಲೆ ಮಾಡಿತೆ? ಹುಡುಗ ಆತ. ಅವನು ಹೇಳಲೇಬೇಕು. ಅವನಿಗೆ ಅರ್ಥವಾಗಲೆಂದು ಕೇಳುತ್ತಿದ್ದೇನೆ."

"ನೀವು ಕೇಳುವ ಪ್ರಶ್ನೆ ಉತ್ತರ ಹೇಳಿಕೊಡುವುದಾಗಿದೆ."

"ಅಷ್ಟು ಚಿಕ್ಕ ಹುಡುಗ, ಇಂಥ ಹೊಸ ಸನ್ನಿವೇಶದಲ್ಲಿ ನಿಂತು ಆ ಘೋರ ಘಟನೆಯೆಲ್ಲವನ್ನೂ ವಿವರಿಸಿಯಾನೆ ? ಮುಖ್ಯವಾದದ್ದನ್ನು ಹೇಳಿ ಬಿಟ್ಟರೆ ಸಾಕು."

"ಹೌದು ಕಲಿಸಿದ ಗಿಳಿಪಾಠ ಒಪ್ಪಿಸಿದರೆ ಸಾಕು. ಯಾರ ತಲೆ ಉರುಳಿ ಹೋದರೇನು ?"

"ಆ ತಲೆ ಉರುಳಿರುವುದಕ್ಕೆ ಈ ತಲೆ ಉರುಳಬೇಕು."

"ನಾನ್‌ಸೆನ್ಸ್ !"

"ಯಾವುದ್ರೀ ನಾನ್‌ಸೆನ್ಸ್ ? ನಿಮ್ಮದು ನಾನ್‌ಸೆನ್ಸ್ !" ಜಡ್ಜ್, ಹತೋಟಿ ಮೀರಿತೆಂದರು.

"ಜಂಟ್ಲ್‌ಮೆನ್, ಇದು ಕೋರ್ಟ್. ನ್ಯಾಯ ನಿರ್ವಹಣೆಗೆ ಸೇರಿದ್ದೇವೆ. ಅದಾಗಬೇಕು. ಇದು ಕಲಹಕ್ಕೆ ಸ್ಥಾನವಲ್ಲ."

ಲಾಯರುಗಳಿಬ್ಬರೂ ಕುಳಿತುಕೊಂಡರು.

ಜಡ್ಜರೇ ಕೇಳುತ್ತಾರೆ— "ಏನಪ್ಪ, ಅವತ್ತು ರಾತ್ರಿ ಏನಾಯ್ತು? ಹೇಳು. ಹೆದರಬೇಡ."

ಹುಡುಗ ನಡುಗತೊಡಗಿದ.

ಅಪರಾಧಿಗಳನ್ನೂ ನೋಡುತ್ತಾನೆ.

ಅವರು ಕೈಮುಗಿದುಕೊಂಡು ನಿಂತಿದ್ದರು. ಅದರಂತೆ ತಾನೂ ಕೈಮುಗಿದುಕೊಂಡ.

ಕೋರ್ಟ್‌ನಲ್ಲಿ ನೆರೆದ ಜನ ನಿಶ್ಶಬ್ದವಾಗಿ ಹುಡುಗನನ್ನು ನೋಡುತ್ತಿದ್ದರು. ಎಲ್ಲರಿಗೂ ಅತಿ ತವಕ—ಏನು ಹೇಳುತ್ತಾನೊ? ಹೇಗೆ ಹೇಳುತ್ತಾನೊ?

ಹುಡುಗ ಮಾತ್ರ ನಿಶ್ಶಬ್ದ. ನಿಂತುಬಿಟ್ಟ; ಮಂಕನಾಗಿ ನಿಂತುಬಿಟ್ಟ.

ಜಡ್ಜ್ ಪುನಃ ಕೇಳಿದರು— "ನಿಮ್ಮ ಅಪ್ಪನಿಗೆ ಏನಾಯಿತಪ್ಪ?"

ಹುಡುಗ ಗೊಳೋ! ಎಂದು ಅಳತೊಡಗಿದ.

ಜಡ್ಜ್ ಹಣೆಗೆ ಕೈಯೂರಿದರು. ಸರ್ಕಾರದ ಲಾಯರು ಮತ್ತು ಇನ್ಸ್‌ಪೆಕ್ಟರ್ ತಲೆ ತಗ್ಗಿಸಿ ಕುಳಿತರು.

ಹುಡುಗ ಬಿಕ್ಕಿ ಬಿಕ್ಕಿ ಅಳುತ್ತಿದ್ದ.

"ನಿಮ್ಮ ತಂದೆ ಎಲ್ಲಿದ್ದಾನೊ ಈಗ?"

ಹುಡುಗನ ರೋದನ ನಿಲ್ಲಲೆ ಇಲ್ಲ.

"ಹುಡುಗನನ್ನು ಆಚೆ ಕರೆದುಕೊಂಡು ಹೋಗಿ, ಸಮಾಧಾನ ಪಡಿಸಿ ಕರೆದುಕೊಂಡು ಬನ್ನಿ," ಎಂದು ಜಡ್ಜ್ ಹೇಳಿದರು.

ಬೆಂಚ್ ಕ್ಲಾರ್ಕ್ ಕರೆದುಕೊಂಡು ಹೋಗಿ, ಸಮಾಧಾನ ಮಾಡಿಸಿ, ತಿಂಡಿತಿನ್ನಿಸಿ ಮತ್ತೆ ಕರೆದುಕೊಂಡು ಬಂದ.

ಇಷ್ಟು ಹೊತ್ತಿಗೆ ಆಗಲೆ ಅಪರಾಧಿಯ ಲಾಯರ್ ತಲೆಯಲ್ಲಿ ಹೊಸ ವಿಧಾನ ಹೊಳೆದಿತ್ತು.

ಹುಡುಗನ್ನು ಮತ್ತೆ ಕಟಕಟೆಗೆ ಸೇರಿಸಿದರು.

ಈ ಭೀಕರಾಕಾರದ ಲಾಯರ್ ಹುಡುಗನ ಹತ್ತಿರ ಹೋಗಿ ನಿಂತು ಕೇಳಿದ, "ಏನೋ ಹುಡುಗಾ, ನಿಮ್ಮಪ್ಪ ಸತ್ತದ್ದು ಯಾವತ್ತೊ ?"

ಸಾಕ್ಷಿಗೆ ಬಂದ ಕೂಸು ನಡುಗಿತು.

"ಸತ್ತಾಗ ಎಷ್ಟೊ ಟೈಮು ?"

ಸುಮ್ಮನಿದ್ದ.

"ಪೊಲೀಸಿನವರು ಏನಾದರೂ ಹೇಳಿಕೊಟ್ಟರೇನೊ ?"

ತಲೆ ಹಾಕಿತು; ಕೂಡಲೆ ಪೊಲೀಸರ ಕಡೆ ನೋಡಿ ಅಲ್ಲಾಡಿಸಿತು.

"ಏನೇನು ಹೇಳಿಕೊಟ್ಟರೋ ನಿನಗೆ ?"

ಹುಡುಗನಿಗೆ ತಡೆಯದಾಯಿತು: ಬಿಕ್ಕಳಿಸಿ ಅತ್ತ, ಗೊಳೊ ಎಂದು ಅತ್ತ. ನೆರೆದ ಜನ ಕಣ್ಣೀರು ಮಿಡಿಯುವಂತೆ ಅತ್ತ, ಎದುರಿಗೆ ನಿಂತಿದ್ದ ಭೀಕರ ಆಕೃತಿಯ ವಕೀಲನನ್ನೂ ನೋಡಿ ಅತ್ತ.

ಮಾತೇ ಬಾರದು.

ಮಗು ತನ್ನ ತಂದೆಯ ಕೊಲೆಯ ಮೊಖದ್ದಮೆಯಲ್ಲಿ ಸಾಕ್ಷಿ ಹೇಳಲು ಬಂದಿದೆ. ಅದು ಏನು ಸಾಕ್ಷಿ ಹೇಳೀತು ?

ಹುಡುಗನನ್ನು ಆಚೆ ಕರೆದುಕೊಂಡು ಹೋದರು.

ಮತ್ತೆ ವಾದ ವಿವಾದ ನಡೆದವು.

ಕೋರ್ಟ್ ಸೇರಿತು.

ಜೂರಿಗಳು ತಮಗೆ ತೋರಿದಂತೆ ಹೇಳಿದರು. ಸಮ್ಮತ ವಾದ ನಿಖರ ಅಭಿಪ್ರಾಯವಿಲ್ಲ.

ಕೋರ್ಟ್‌ನಲ್ಲಿ ಕುಳಿತು ಎಲ್ಲರನ್ನೂ ಜಡ್ಜರು ನೋಡುತ್ತಾ, ಕನ್ನಡಕ ಒರೆಸಿಕೊಂಡರು. ಲೇಖನಿ ಎತ್ತಿ ಬರೆಯ ತೊಡಗಿದರು. ಬರೆಯುವಾಗ ಹೇಗೊ ಮುಳ್ಳು ಮುರಿಯಿತು. ಬೇರೆ ಲೇಖನಿ ತರಿಸಿದುದೂ ಆಯಿತು.

ಜಡ್ಜ್ ಸಂಕಟದಿಂದ ಹುಡುಗನ ಕಡೆ ನೋಡುತ್ತ ಬರವಣಿಗೆ ಮುಂದು ವರಿಸಿದರು.

ಮೊಖದ್ದಮೆಯ ಘಟನೆಯೆಲ್ಲವನ್ನೂ ಕಥೆಯಲ್ಲಿ ಹೇಳುವ ಹಾಗೆ ಬರೆ ದಿದ್ದರು. "ಮುಖ್ಯವಾದ ಸಾಕ್ಷಿ ಕೊಲೆಯಾದವನ ಮಗು. ಆತ ಸಾಕ್ಷಿ ನುಡಿ ಯಲಾರದವನಾಗಿದ್ದಾನೆ. ಕೊಲೆಯಾಗಿದೆ. ನೇರವಾದ ಸಾಕ್ಷಿ ಸಿಕ್ಕದಿದ್ದರೂ ಬಳಸಿದ ಸಾಕ್ಷಿ ದೊರೆತಿದೆ. ಕೊಲೆಗೆ ಆತನ ಹಣ ಕಾರಣ. ತನ್ನ ಪದಾರ್ಥ ರಕ್ಷಿಸಲು ಹೋರಾಡಿದ್ದಾಗ ಆತನನ್ನು ಕತ್ತು ಹಿಸುಕಿ ಸಾಯಿಸಿದರು. ಯಾರು ಸಾಯಿಸಿದರು? ಇದಕ್ಕೆ ನೇರವಾದ ಸಾಕ್ಷಿ ದೊರೆಯಲಿಲ್ಲ. ಕಾನೂನು ದೃಷ್ಟಿಯಿಂದ ಅಪರಾಧ ಸ್ಥಿರವಾಗಲಿಲ್ಲ. ಆಪಾ ದಿತರನ್ನು ಬಿಡುಗಡೆ ಮಾಡಲಾಗಿದೆ," ಎಂದು ಹೇಳಿದರು.

ಹುಡುಗನನ್ನು ಪೊಲೀಸ್ ಕಾನ್‌ಸ್ಟೇಬಲ್ ಊರಿಗೆ ಕರೆದುಕೊಂಡು ಹೋಗುವಾಗ ಆ ಮಗು ಹೇಳುತ್ತದೆ:

'ಪೊಲೀಸಣ್ಣಾ, ನೋಡು ನಂಗೆ ಆ ದಪ್ಪ ಲಾಯರಪ್ಪ ಎಲ್ಲಾ ಹೇ ಕೊಟ್ಟವನೆ; ಅವನ್ನ ನೋಡಿ ಬಾಳ ಹೆದರಿಕೆ ಆಯ್ತಪ್ಪ ನಂಗೆ. ಆದ್ರೂ ಒಳ್ಳೇವನಲ್ಲವಾ ಆ ಲಾಯರಿ?'

'ಅಯ್ಯೋ ಮಗಾ!'



# ಶುದ್ಧಪತ್ರಿಕೆ

| ಪುಟ | ಸಾಲು | ತಪ್ಪು | ಸರಿ |
|---|---|---|---|
| 1 | ಕೊನೆಯ ಸಾಲು | ಬೆಲಿಹೆಣ್ಣಿನ | ಬೆಲೆವೆಣ್ಣಿನ |
| 2 | 10 ,, | ನಿಂತು | ಇಂತು |
| 5 | 7 ,, | ವಿಷ್ಣುರೂಪಾಯ ಶಿವ। ಶಿವರೂಪಾಯ ವಿಷ್ಣುವೆ। | ಶಿವಾಯ ವಿಷ್ಣು ರೂಪಾಯ। ಶಿವ ರೂಪಾಯ ವಿಷ್ಣವೆ। |
| 5 | 12 ,, | ಕಳ್ಳ ಕ್ಯಾತರ | ಕಿಳ್ಳಿಕ್ಯಾತರ |
| 6 | 16 ,, | ಸಲುಗೆ | ಸಲಿಗೆ |
| 12 | 15 ,, | ದಣಿ | ಧಣಿ |
| 25 | 12 ,, | ಪಜೀತಿ | ಫಜೀತಿ |
| 39 | 13 ,, | ಹಿಂದೂಸ್ತಾನದ | ಹಿಂದೂಸ್ಥಾನದ |
| 41 | 10 ,, | ಸೂರ್ಯರಶ್ಮಿ | ಸೂರ್ಯರಶ್ಮಿಸ್ನಾನ |
| 44 | 2 ,, | ಭ್ರಮಿಷ್ಠ | ಭ್ರಮಿಷ್ಟ |
| 46 | 22 ,, | ಹುಣ್ಣೆ | ಹುಣ್ಣಿ |
| 60 | 8 ,, | ಪಿತೂರಿ | ಫಿತೂರಿ |
| 70 | 1 ,, | ನಿಮಗೆ | ನಿನಗೆ |
| 72 | 19 ,, | ನೊಡಿ | ನೋಡಿ |
| 77 | 1 ,, | ದುರುಗಮುರುಗಿಯವರು | ದುರುಗಿಮುರುಗಿಯವರು |
| 79 | 1 ,, | ಚಂದೂಕನ್ಯಾಗ | ಬಂದೂಕಿನ್ಯಾಗ |
| ,, | 10 ,, | ಗೂಂಢಾಂಶ | ಗೂಢಾಂಶ |
| 80 | 5 ,, | ಮಂತ್ರೋೀಚ್ಫಾರಣೆ | ಮಂತ್ರೋಚ್ಚಾರಣೆ |
| ,, | 6 ,, | ಋಘೇ | ಋಘೇ |
| ,, | 16 ,, | ದೆಎ | ಎದೆ |

# ಶಾರದಾ ಸಾಹಿತ್ಯ ಮಾಲೆಯ ಪ್ರಕಟನೆಗಳು.

| | | ಬೆಲೆ |
|---|---|---|
| ೧ | ಕಾರವಾನ್ (ದ್ವಿತೀಯ ಮುದ್ರಣ) | ೧ ರೂ. ೪ ಆ. |
| ೨-೩ | ಸ್ವಾತಂತ್ರದೆಡೆಗೆ | |
| ೪ | ಜೀವನ-ಕಲೆ | ೧ ರೂ. |
| ೫ | ಮುಗುಳುನಗೆ | ೧ ರೂ. ೪ ಆ. |
| ೬ | ಸ್ವಪ್ನ ಸುಂದರಿ | ೧ ರೂ. ೪ ಆ. |
| ೭-೮ | ಆಲದ ಹೂ | ೧ ರೂ. ೧೨ ಆ. |
| ೯ | ಹುಡುಗಾಟ | ೧ ರೂ. ೪ ಆ. |
| ೧೦ | ಶವದ ಮನೆ | ೧ ರೂ. ೪ ಆ. |
| ೧೧ | ಎದಿರೇಟು | ೧ ರೂ. ೮ ಆ. |
| ೧೨-೧೩ | ಸರ್ವಮಂಗಳ | ೪ ರೂ. ೮ ಆ. |
| ೧೪ | ಕೇಡಿಗನ ಕಿಡಿಗಳು | ೧ ರೂ. |
| ೧೫ | ದೇವತೆಗಳು ನಕ್ಕಾಗ | ೧ ರೂ. ೪ ಆ. |

## ಲಲಿತ ಸಾಹಿತ್ಯದ ಪ್ರಕಟನೆ.

೧. ಮಾಯಾ — ಬೆಲೆ : ಎಂಟಾಣೆ